ಪ್ರಚಾರ ಪುಸ್ತಕ ಮಾಲೆ

188

# ಎಡೆಯೂರು ತೋಂಟದ ಸಿದ್ಧಲಿಂಗಯತಿ

ಓ. ಎಸ್. ಲಿಂಗಣ್ಣಯ್ಯ



ಪ್ರಚಾರ ಪುಸ್ತಕಮಾಲೆ–೧೮೮

# ಎಡೆಯೂರು ತೋಂಟದ ಸಿದ್ಧಲಿಂಗಯತಿ

ಓ. ಎನ್. ಲಿಂಗಣ್ಣಯ್ಯ




೧೯೬೦

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಯ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ಅವರ ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆ ಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ

ವಿಷಯಂಗಳನ್ನು ಕುರಿತ ನೂರ ಎಂಬತ್ತೇಳು ಪುಸ್ತಕಗಳು ಪ್ರಕಟ ವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಓ. ಎನ್. ಲಿಂಗಣ್ಣಯ್ಯ ಅವರ 'ಎಡೆಯೂರು ತೋಂಟದ ಸಿದ್ಧಲಿಂಗಯತಿ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

**ದೇ. ಜವರೇಗೌಡ**
ಕುಲಪತಿಗಳು

# ಅರಿಕೆ

ವಚನವಾಙ್ಮಯ ಅಪಾರ; ಅನಂತ. ಈ ವಾಙ್ಮಯ ಹನ್ನೆರಡನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಅಪೂರ್ವಕಾಂತಿಯಿಂದ ಬೆಳಗಿತು. ಶಿವಶರಣರು ಜನಜೀವನದಲ್ಲಿ ಮಾನವರೆಲ್ಲ ಸರ್ವಸಮಾನರು ಎಂಬ ಉದಾತ್ತ ತತ್ತ್ವವನ್ನು ಬೋಧಿಸಿ ಆಚರಿಸಿ ಕೃತಾರ್ಥರಾದರು. ಸಮಾಜದಲ್ಲಿ ನವಚೈತನ್ಯ ಉದಯವಾಯಿತು. ಅಲ್ಲಿಂದ ಮುನ್ನೂರು ವರ್ಷಗಳ ತರುವಾಯ ಎಡೆಯೂರು ತೋಂಟದ ಸಿದ್ಧಲಿಂಗಯತಿವರ್ಯರು ಅವತರಿಸಿ ಧರ್ಮ, ಸಾಹಿತ್ಯ, ಸಂಸ್ಕೃತಿಗಳನ್ನು ಪರಿಪೋಷಿಸಿ, ಜನಜೀವನವನ್ನು ರೂಪಿಸಿದರು. ಅವರು ಹರದನಹಳ್ಳಿಯ ಸನಾತನ ಗುರುಪೀಠದ ಗುರುಪರಂಪರೆಯಲ್ಲಿ ಹದಿನಾರನೆಯವರು. ಅವರು ಉತ್ತಮ ಸಾಹಿತಿ, ವಚನಕಾರರು; ಶಾಸ್ತ್ರಜ್ಞಾನಸಂಪನ್ನರು; ಶಿವಯೋಗನಿಷ್ಠರು; ಮಹಾಮಹಿಮರು. ಅವರ ಬೋಧೆಯಿಂದ ಸಮಾಜ ಸಂಧಾರಿಸಿತು. ಅವರ ಜೀವನದರ್ಶನವನ್ನು ಅನೇಕ ಕವಿಗಳು ಕಾವ್ಯರೂಪದಲ್ಲಿ ಚಿತ್ರಿಸಿರುತ್ತಾರೆ. ಅವರ ಪವಾಡಗಳನ್ನು ವರ್ಣಿಸಿರುತ್ತಾರೆ. ಅವರ ಶಿಷ್ಯಕೋಟಿ ಕನ್ನಡನಾಡಿನಲ್ಲಿ ತುಂಬಿದೆ. ಹರದನಹಳ್ಳಿಯ ಸಿದ್ಧಸಿಂಹಾಸನ ಪರಂಪರೆ ಅತ್ಯಂತ ಪ್ರಾಚೀನವಾದುದು. ಆ ಪೀಠದ ಆಶ್ರಯದಲ್ಲಿ ಜನಜೀವನ ನಿರ್ಮಲವಾಯಿತು. ಸಿದ್ಧಲಿಂಗರು ಸರ್ವಧರ್ಮಸಮನ್ವಯ ದೃಷ್ಟಿಯಿಂದ ವಿಶ್ವಮಾನ್ಯರಾದರು. ಈ ಮಹಾಪುರುಷರ ಐದನೆಯ ಶತಮಾನೋತ್ಸವವನ್ನು ಮೈಸೂರು ಅರಮನೆಯ ಜಪದಕಟ್ಟೆಯ ಮಠದ ಆವರಣದಲ್ಲಿ ಆ ಮಠದ ಸ್ವಾಮಿಗಳಾಗಿರುವ ಶ್ರೀ ಇಮ್ಮಡಿ ಸದಾಶಿವ ಶಿವಾಚಾರ್ಯರ

(ಶ್ರೀ ಶಿವಪ್ರಕಾಶ ಸ್ವಾಮಿಂಗಳ) ನೇತೃತ್ವದಲ್ಲಿ ಮಹಾಜನರು ವೈಭವದಿಂದ ಆಚರಿಸಿದರು. ಆ ದಿನ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಪ್ರೊ. ಡಿ. ಜವರೇಗೌಡ, ಎಂ.ಎ., ಅವರು ಸಭಾಧ್ಯಕ್ಷತೆಯನ್ನು ವಹಿಸಿ ಪ್ರೋತ್ಸಾಹಿಸಿದರು. ಆ ಸಮಾರಂಭವನ್ನು ಉದ್ಘಾಟನೆ ಮಾಡುವ ಅವಕಾಶ ನನಗೆ ಲಭಿಸಿತ್ತು. ಇದು ನನ್ನ ಸುಯೋಗ. ಅಂದು ನಾನು ಮಾಡಿದ ಉದ್ಘಾಟನಾ ಭಾಷಣದ ಅಂಶಗಳನ್ನು ಅಲ್ಲಲ್ಲಿ ವಿಸ್ತರಿಸಿ ಈ ಪುಟ್ಟ ಹೊತ್ತಗೆಯ ರೂಪದಲ್ಲಿ ಬರೆದಿರುತ್ತೇನೆ. ಇದನ್ನು ಪ್ರಕಟಿಸಲು ದಯೆಯಿಟ್ಟು ಆಶ್ರಯವಿತ್ತ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರವರ್ಗದವರಿಗೂ, ಪ್ರಸಾರಾಂಗದ ಕಾರ್ಯಕರ್ತರಿಗೂ ನಾನು ತುಂಬ ಕೃತಜ್ಞನಾಗಿರುತ್ತೇನೆ.

ಮೈಸೂರು
೧೫–೮–೧೯೭೧

ಓ. ಎಸ್. ಲಿಂಗಣ್ಣಯ್ಯ

ವೀರಶೈವವಾಙ್ಮಯದಲ್ಲಿ ಎಡೆಯೂರು ಸಿದ್ಧಲಿಂಗಯತಿ ವರ್ಯರು ಮಹೋನ್ನತ ಗೌರವಸ್ಥಾನವನ್ನು ಪಡೆದಿರುತ್ತಾರೆ. ಅವರು ಪರಮ ವೇದಾಂತ ಹೃದಯರು; ಉತ್ತಮ ವಚನಕಾರರು; ಆಧ್ಯಾತ್ಮಸಂಪನ್ನರು ; ಆತ್ಮ ತತ್ತ್ವಸಿದ್ಧರು : ಶಿವಯೋಗೀಶ್ವರರು. ಅವರು ಮಾನವ ಸಮಾಜದ ಅಭ್ಯುದಯವನ್ನು ಚಿಂತಿಸಿದರು ; ಸಾಧಿಸಿದರು ; ಕೃತಾರ್ಥರಾದರು. ಅವರು ಸಕಲ ಜೀವಕೋಟಿಯಲ್ಲಿಯೂ ಭಗವಂತನನ್ನು ಕಂಡರು ; ಆರಾಧಿಸಿದರು ; ತಾವು ಭಗವಂತನೇ ಆದರು. ಅವರು ನೊಂದವರನ್ನು ಸಂತೈಸಿದರು; ಆರ್ತರನ್ನು ಅನುಗ್ರಹಿಸಿದರು; ಪತಿತರನ್ನು ಉದ್ಧಾರ ಮಾಡಿದರು ; ಅಂತ್ಯಜರನ್ನು ಪಾವನಗೊಳಿಸಿದರು ; ಅವರು ಭರತಖಂಡವನ್ನು ಸುತ್ತಿ ಧರ್ಮಸಂಸ್ಥಾಪನೆ ಮಾಡಿದರು ; ಸಾಹಿತ್ಯವನ್ನು ಉಜ್ಜೀವನಗೊಳಿಸಿದರು; ಸಂಸ್ಕೃತಿಯನ್ನು ಬೆಳಸಿದರು.

ಸಿದ್ಧಲಿಂಗರು ಹರದನಹಳ್ಳಿಯಲ್ಲಿ ವೀರಶೈವ ಗುರುಸ್ಥಲ ಕುಟುಂಬದಲ್ಲಿ ಜನಿಸಿದರು. ಹರದನಹಳ್ಳಿ ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನಲ್ಲಿದೆ. ಅದು ಚಾಮರಾಜನಗರದಿಂದ ದಕ್ಷಿಣಕ್ಕೆ ಸುಮಾರು ಎರಡು ಹರದಾರಿ ದೂರದಲ್ಲಿದೆ. ಅದು ಕನ್ನಡನಾಡಿನ ದಕ್ಷಿಣಾಗ್ರ ಪ್ರಾಂತ್ಯದಲ್ಲಿ ತಮಿಳುನಾಡು ಕನ್ನಡ ನಾಡನ್ನು ಸಂಧಿಸುವ ಆಯಕಟ್ಟಿನಲ್ಲಿದೆ. ಹಿಂದಣ ಕಾಲದಲ್ಲಿ ವರ್ತಕರು ಈ ಮಾರ್ಗವಾಗಿ ಕನ್ನಡ ನಾಡಿನಿಂದ ತಮಿಳು ಮತ್ತು ಕೇರಳ ನಾಡುಗಳಿಗೆ ವ್ಯಾಪಾರಕ್ಕಾಗಿ ಹೋಗಿ ಬರುತ್ತಿದ್ದರು. ಹರದನಹಳ್ಳಿಯನ್ನು ವೀರಶೈವ ಸಾಹಿತ್ಯದಲ್ಲಿ ವಾಣಿಜ್ಯ

ಪುರವೆಂದು ಕರೆದಿರುತ್ತಾರೆ. ಇದು ಅತ್ಯಂತ ಪ್ರಾಚೀನ ನಗರ ವೆಂದು ನಂಬಲು ಆಧಾರಗಳಿವೆ. ಪುರಾತನ ಕಾಲದಿಂದಲೂ ಇದು ವೀರಶೈವ ಧರ್ಮಕ್ಷೇತ್ರವಾಗಿತ್ತೆಂದು, ತಿಳಿದುಬರುತ್ತದೆ. ಗೋಸಲ ಚನ್ನಬಸವೇಶ್ವರ ಎಂಬುವರು ಹದಿನೈದನೆಯ ಶತ ಮಾನದಲ್ಲಿ ಇಲ್ಲಿದ್ದ ವೀರಶೈವ ಮಠದ ಗುರುವಾಗಿದ್ದರು. ಈ ಗುರುಪೀಠ ಸುಮಾರು ಹತ್ತನೆಯ ಶತಮಾನದಲ್ಲಿ ಸ್ಥಾಪನೆ ಯಾಯಿತೆಂದು ಇತಿಹಾಸದಿಂದ ವ್ಯಕ್ತವಾಗುತ್ತದೆ. ಶ್ರೀಗೋಸಲ ಚನ್ನಬಸವೇಶ್ವರರ ತರುವಾಯ ಎಡೆಯೂರು ಸಿದ್ಧಲಿಂಗರು ಈ ಸಿದ್ಧಸಂಪ್ರದಾಯ ಪೀಠದ ಸ್ವಾಮಿಯಾದರು. ಆ ಪೀಠದ ಗುರು ಪಟ್ಟಾವಳಿಯಲ್ಲಿ ಶ್ರೀಸಿದ್ಧಲಿಂಗಯತೀಶ್ವರರು ಹದಿನಾರನೆ ಯವರು.

೨

ಸಿದ್ಧಲಿಂಗರ ಜನನ ಬಾಲ್ಯ ಮತ್ತು ವಿದ್ಯಾಭ್ಯಾಸ ವಿಚಾರ ಗಳನ್ನು ಕುರಿತು ಸಾಕಾದಷ್ಟು ವಿವರಗಳು ತಿಳಿದುಬರುವುದಿಲ್ಲ. ಅವರ ಜನ್ಮವೃತ್ತಾಂತವನ್ನು ಪುರಾಣಗಳಲ್ಲಿ ಅದ್ಭುತ ಪವಾಡದಂತೆ ವರ್ಣಿಸಿದ್ದರೂ, ಎಲ್ಲ ಮಾನವರಂತೆಯೇ ಅವರೂ ಮಾತೃಗರ್ಭ ದಲ್ಲಿ ಜನಿಸಿದರೆಂಬುದು ನಿಜ. ಸಿದ್ಧಲಿಂಗರ ವಚನಗಳಲ್ಲಿಯೇ ಆಗಲಿ, ಅವರ ಸಮಕಾಲೀನ ಶಿಷ್ಯ, ಪ್ರಶಿಷ್ಯರ ವಚನಗಳಲ್ಲಿಯೇ ಆಗಲಿ ಅವರ ತಂದೆತಾಯಿಯರ ವಿಚಾರವನ್ನು ಹೇಳಿಲ್ಲ. ಎಂಟು ವರ್ಷದ ವಟು ಸಿದ್ಧಲಿಂಗರು ಹರದನಹಳ್ಳಿಯ ಮಠದಲ್ಲಿ ಗುರು ಗೋಸಲ ಚನ್ನಬಸವೇಶ್ವರರ ಸನ್ನಿಧಿಯಲ್ಲಿ ಒಂದು ದಿನ ಅನಿ ರೀಕ್ಷಿತವಾಗಿ ಕಾಣಿಸಿಕೊಂಡರೆಂದು ಮಾತ್ರ ವೀರಶೈವ ಗ್ರಂಥ ಗಳಿಂದ ತಿಳಿದುಬರುತ್ತದೆ. ಆದರೆ ಯಲಹಂಕದ ಹೇರಂಬ ಎಂಬ

ಬ್ರಾಹ್ಮಣಕವಿಯು ಬರೆದಿರುವ "ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಸಾಂಗತ್ಯ" ಎಂಬ ಗ್ರಂಥದಲ್ಲಿ ಮಲ್ಲಿಕಾರ್ಜುನ ಮತ್ತು ಜ್ಞಾನಾಂಬೆಯರು ಸಿದ್ಧಲಿಂಗರ ತಂದೆತಾಯಿಗಳೆಂದು ನಿರ್ದಿಷ್ಟವಾಗಿ ಹೇಳಿರುತ್ತದೆ. ಈ ದಂಪತಿಗಳಿಗೆ ಬಹಳ ಕಾಲ ಸಂತಾನವಿರಲಿಲ್ಲ. ಅವರು ಪ್ರತಿದಿನವೂ ಆ ಹರದನ ಹಳ್ಳಿಯ ಅಮೃತಲಿಂಗೇಶ್ವರ ಸ್ವಾಮಿಯ ದೇವಾಲಯಕ್ಕೆ ಹೋಗಿ ದೇವರ ದರ್ಶನ ಮಾಡುತ್ತಿದ್ದರು. ಆ ದೇವಾಲಯದ ಮಠದಲ್ಲಿದ್ದ ಶ್ರೀ ಗುರುಗೋಸಲ ಚನ್ನಬಸವೇಶ್ವರರನ್ನು ಅವರು ಆರಾಧಿಸುತ್ತ ಆಗಾಗ ತಮ್ಮ ಮನದ ಅಳಲನ್ನು ಅವರಲ್ಲಿ ನಿವೇದಿಸಿಕೊಳ್ಳು ತ್ತಿದ್ದರು. ಅವರ ಕೈಂಕರ್ಯದಿಂದ ದೇವರೂ ಗುರುವೂ ಸಂತುಷ್ಟರಾದರೆಂಬಂತೆ, ಕೆಲವು ಕಾಲದಲ್ಲಿಯೇ ಜ್ಞಾನಾಂಬೆ ಗರ್ಭವತಿಯಾದಳು. ನವಮಾಸ ತುಂಬಿತು. ಶುಭದಿನದಲ್ಲಿ ಆಕೆ ಗಂಡು ಮಗುವನ್ನು ಪಡೆದಳು. ಗೋಸಲಸಿದ್ಧ ಸಂಪ್ರದಾಯದ ಗುರುಪ್ರಸಾದದಿಂದಲೂ ಅಮೃತಲಿಂಗೇಶ್ವರನ ಅನುಗ್ರಹ ದಿಂದಲೂ ಜನಿಸಿದ ಆ ಮಗುವಿಗೆ ಸಿದ್ಧಲಿಂಗನೆಂದು ನಾಮಕರಣ ವಾಯಿತು. ಶಿವಾಂಶವೇ ಶಿಶುರೂಪಿನಿಂದ ಅವತರಿಸಿತೆಂದು ಹೇರಂಬ ಕವಿಯೂ ಸಿದ್ಧಲಿಂಗರ ಜನನವನ್ನು ಕಾವ್ಯವಾಣಿಯಲ್ಲಿ ಸೂಚಿಸಿದ್ದಾನೆ.

ತಾಯಿಯ ವಾತ್ಸಲ್ಯಪೂರ್ಣ ಪಾಲನೆಯಲ್ಲಿ,ತಂದೆಯ ಪ್ರೇಮ ಪೂರ್ಣ ಆರೈಕೆಯಲ್ಲಿ, ಶಿವಭಕ್ತಶ್ರೇಣಿಯ ಸಂಗೋಷ್ಠಿಯಲ್ಲಿ, ಗುರುದೇವನ ಕೃಪಾವಲೋಕನದಲ್ಲಿ, ಅಮೃತಲಿಂಗೇಶ್ವರನ ಸಾನ್ನಿಧ್ಯದಲ್ಲಿ ಸಿದ್ಧಲಿಂಗರ ಪುಣ್ಯಜೀವನ ರೂಪುಗೊಳ್ಳುತ್ತಿತ್ತು. ಶಿಶುರೂಪದಲ್ಲಿ ಮಾತೃಗರ್ಭದಲ್ಲಿದ್ದಾಗಲೇ ಶ್ರೀ ಗುರುವಿನಿಂದ ಅವರು ವಿಭೂತಿಪಟ್ಟವನ್ನು ಪಡೆದು ಲಿಂಗದೀಕ್ಷೆಯನ್ನು ಹೊಂದಿ

ದ್ದರು. ಇದು ವೀರಶೈವಧರ್ಮದ ಪ್ರಕ್ರಿಯೆ. "ಗುರುವಿನಿಂದ ಉಪದೇಶವ ಪಡೆದು ಗುರುಪುತ್ರನೆನಿಸಿಕೊಂಡು ಬಳಿಕ ಪೂರ್ವದ ತಂದೆತಾಯಿಯೆಂದು ಬಂಧುಬಳಗವೆಂದು ಮಲಸಂಬಂಧವ ನೆನೆಯಲಾಗದು. ನೆನೆದಿರಿಯಾದರೆ ಶಿವದ್ರೋಹ ತಪ್ಪದು. ಗುರುವೆ ತಾಯಿ, ಗುರುವೆ ತಂದೆ, ಗುರುವೇ ಬಂಧು, ಗುರುವಿನಿಂದ ಹೊರತು ಇನ್ನು ಯಾರೂ ಇಲ್ಲ" ಎಂದು ಸಿದ್ಧಲಿಂಗರು ಅವರ ವಚನವೊಂದರಲ್ಲಿ ಈ ತತ್ವವನ್ನು ನಿರೂಪಿಸಿದ್ದಾರೆ. ಅವರಿಗೆ ಬಾಲ್ಯದಲ್ಲಿ ಶ್ರೀಗುರು ಮಠದಲ್ಲಿಯೇ ವಿದ್ಯಾಭ್ಯಾಸವಾಯಿತು. ಶ್ರೀ ಗೋಸಲ ಚನ್ನಬಸವೇಶ್ವರರೇ ಸಿದ್ಧಲಿಂಗರ ವಿದ್ಯಾಗುರು: ದೀಕ್ಷಾಗುರು ಎಂಬುದರಲ್ಲಿ ಸಂಶಯವಿಲ್ಲ. ಆ ಅಮೃತಲಿಂಗೇಶ್ವರನ ಸನ್ನಿಧಿಯಲ್ಲಿ ಎತ್ತ ನೋಡಿದರೂ ಶಿವಲಿಂಗ ದರ್ಶನವೇ: ಎಲ್ಲಿ ನೋಡಿದರೂ ಜಂಗಮತಿಂಥಿಣಿಯೇ! ಅಲ್ಲಿ ನಡೆಯುತ್ತಿದ್ದ ಶಿವಪೂಜೆ, ಶಿವಸಂಗೋಷ್ಠಿ, ಶಿವಪುರಾಣಶ್ರವಣ, ವೇದಾಧ್ಯಯನ—ಇವುಗಳ ಪುಣ್ಯಾವರಣದಲ್ಲಿ ಆ ಬಾಲಸಿದ್ಧಲಿಂಗನ ಹೃದಯ ಶಿವಜ್ಞಾನ ಪ್ರಭೆಯಿಂದ ಬೆಳಗಿತು. ಅವರು ವೇದ, ಆಗಮ, ಉಪನಿಷತ್ತುಗಳನ್ನು ಕಲಿತು ಪ್ರವೀಣರಾದರು; ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿಗಳಲ್ಲಿ ನಿಷ್ಣಾತರಾದರು; ಚಾರ್ವಾಕ, ಜೈನ, ಬೌದ್ಧ, ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಧರ್ಮಜ್ಞಾನದಲ್ಲಿ ಪಂಡಿತರಾದರು. ಗೋಸಲಚನ್ನಬಸವದೇಶಿಕರ ಗುರುಕಾರುಣ್ಯ ಅವರಿಗೆ ಲಭಿಸಿತು. ಅದು ಜ್ಯೋತಿಯಲ್ಲೊದಗಿದ ಜ್ಯೋತಿಯಂತಾಯಿತ್ತು! ಶಿಷ್ಯಸಿದ್ಧಲಿಂಗರು ತಮ್ಮ ವಚನಾಮೃತದಿಂದ ಶ್ರೀಗುರು ಪಾದಸೇವನೆ ಮಾಡಿದ್ದಾರೆ. "ಭವವೆಂಬ ಅರಣ್ಯದಲ್ಲಿ ಪ್ರವೇಶಿಸುತಿಪ್ಪವಂಗೆ ಬೆಂದ ಅಜ್ಞಾನದಿಂದ ಸುತ್ತುತ್ತ ಹಿಂದುಮುಂದು ಎಡಬಲ ಅಡಿ ಆಕಾಶ ನಡುಮಧ್ಯ

ವಾವುದೆಂದರಿಯದೆ ಇರುವುದಕ್ಕೆ ಇಂಬುಗಾಣದಂಗೆ, ಶಿವತತ್ವವೇ ಆಶ್ರಮವೆಂದು ತೋರಿಸಿದ ಸದ್ಗುರು ದೇವಂಗೆ ನಮೋನಮೋ'' ಎಂದು ಸಾಷ್ಟಾಂಗ ಪ್ರಣಾಮಗಳನ್ನು ಅವರು ಗುರುಸನ್ನಿಧಿಯಲ್ಲಿ ಅರ್ಪಿಸಿದ್ದಾರೆ. ಗುರುವೆಂದರೆ ಶಿಷ್ಯನಿಗೆ ಸಾಕ್ಷಾತ್ ದೈವ, ''ಸುರತರುವೃಕ್ಷದೊಳಗಲ್ಲ, ಸುರಧೇನುಪಶುವಿನೊಳಗಲ್ಲ, ಪರುಷ ಪಾಷಾಣದೊಳಗಲ್ಲ, ಶಿಷ್ಯನ ಭಾವಕ್ಕೆ ಗುರು ನರನಲ್ಲ. ಗುರುವೇ ಪರಮೇಶ್ವರ" ಎಂದು ಸಿದ್ಧಲಿಂಗರು ಗುರುಸ್ಥಾನವನ್ನು ಗೌರವಿಸಿದ್ದಾರೆ. ಇಂಥ ಗುರುಸನ್ನಿಧಿಯಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ಸಿದ್ಧಲಿಂಗರು ಷಟ್ಸ್ಥಲಜ್ಞಾನಸಂಪನ್ನರಾದರು. ನಿರಂಜನ ಗಣೇಶನ ಅವತಾರವೇ ಸಿದ್ಧಲಿಂಗರೆಂದು ಶಿವಭಕ್ತರು ನಂಬಿದರು. ''ಗುರುವಿನ ಅಂಗ ಶಿಷ್ಯ, ಶಿಷ್ಯನ ಅಂಗ ಗುರು, ಗುರುವಿನ ಪ್ರಾಣ ಶಿಷ್ಯ, ಶಿಷ್ಯನ ಪ್ರಾಣ ಗುರು, ಈ ಗುರುಶಿಷ್ಯ ಸಂಬಂಧ ಒಂದಾದ ಬಳಿಕ ಗುರುಶಿಷ್ಯರೆಂದು'' ಬೇರೆ ಬೇರೆ ಭಾವಿಸಲುಂಟೆ? ಆ ಪರಮ ಗುರು ಆ ಪರಮ ಶಿಷ್ಯ! ಆ ಗುರುಶಿಷ್ಯ ಸಂಬಂಧ ಆದರ್ಶಪ್ರಾಯವಾಯಿತು.

ಕ್ರಿ.ಶ. ಎಂಟನೆಯ ಶತಮಾನದ ಹೊತ್ತಿಗೆ ತಮಿಳು ನಾಡಿನಲ್ಲಿ ಶೈವಧರ್ಮ ವಿಶೇಷವಾಗಿ ಪ್ರಚಾರದಲ್ಲಿತ್ತು. ಅರುವತ್ತುಮೂವರು ಪುರಾತನರು ಅಲ್ಲಿ ಪ್ರಸಿದ್ಧರಾಗಿದ್ದರು. ಸಕಲ ಜೀವಾತ್ಮರೆಲ್ಲ ಒಂದೇ; ಜಾತಿ ಮತ ಕೀಳು ಮೇಲು ಎಂಬ ತಾರತಮ್ಯ ಶಿವಭಕ್ತರಲ್ಲಿ ಇರಬಾರದು ಎಂದು ಅವರು ಬೋಧಿಸಿದ್ದರು. ಅವರ ಪ್ರಭಾವ ಕನ್ನಡನಾಡಿನ ಮೇಲೆ ಪ್ರತಿಬಿಂಬಿಸಿತ್ತು. ದಕ್ಷಿಣಾಪಥದಲ್ಲಿ, ಶಿವಾಲಯಗಳಲ್ಲಿ, ಅರುವತ್ತುಮೂವರು ಪುರಾತನರ ವಿಗ್ರಹಗಳನ್ನು ಸ್ಥಾಪಿಸುವ ಸಂಪ್ರದಾಯವೂ ಒಂದಿತ್ತು. ನಂಜನಗೂಡಿನ ಶ್ರೀಕಂಠೇಶ್ವರಸ್ವಾಮಿಯ ದೇವಾಲಯದಲ್ಲಿಯೂ, ಚಾಮರಾಜ

ನಗರದ ಚಾಮರಾಜೇಶ್ವರಸ್ವಾಮಿಯ ದೇವಸ್ಥಾನದಲ್ಲಿಯೂ ಈ ಅರುವತ್ತುಮೂವರು ಪುರಾತನರ ವಿಗ್ರಹಗಳು ಕಂಗೊಳಿಸುತ್ತಿವೆ. ತಮಿಳು ನಾಡಿನ ದೊರೆಗಳು ಕೆಲವು ಕಾಲ ಕಾವೇರಿಯವರೆಗೂ ಕನ್ನಡನಾಡನ್ನು ಆಳುತ್ತಿದ್ದರು. ಅನೇಕ ಶೈವಸಂತರು ಹರದನಹಳ್ಳಿಯ ಗುರುಪೀಠದಲ್ಲಿ ವೀರಶೈವ ದೀಕ್ಷೆಯನ್ನು ಪಡೆಯುತ್ತಿದ್ದುದುಂಟು. ಸಿದ್ಧಲಿಂಗರು ಪೂರ್ವಜನ್ಮ ಸಂಸ್ಕಾರದಿಂದ ಮಹಾಜ್ಞಾನಿಯಾಗಿದ್ದರು. ಷಟ್ಸ್ಥಲ ಸಾಧನೆ ಮತ್ತು ಆತ್ಮಸಂಸ್ಕಾರಗಳಿಂದ ಅವರು ಮಹಾಮಹಂತರಾದರು. ಅವರ ಶಿವಯೋಗ ಪ್ರಖರವಾಯಿತು. ಶಿಷ್ಯಸಂಕುಲ ಬೆಳೆಯುತ್ತ ಬಂತು.

ಸಿದ್ಧಲಿಂಗರಿಗೆ ಸುಮಾರು ಇಪ್ಪತ್ತೈದು ವರ್ಷ ವಯಸ್ಸಾಯಿತು. ಗೋಸಲ ಚನ್ನಬಸವೇಶ್ವರರ ಶಿವಯೋಗಶಕ್ತಿ ಸಿದ್ಧಲಿಂಗರ ಆತ್ಮಸಂಯಮವನ್ನು ಪರಿಪೋಷಿಸಿತು. ಇದು ಅವರಿಗಿದ್ದ ಗುರುಬಲ! ಹರದನಹಳ್ಳಿಯ ಸಿದ್ಧಸಂಪ್ರದಾಯ ಪೀಠದ ಪ್ರಾಚೀನ ಗುರುಪರಂಪರೆಯಲ್ಲಿ ಒಬ್ಬೊಬ್ಬರೂ ಆತ್ಮಯೋಗಸಿದ್ಧರು, ಶಿವಯೋಗನಿಷ್ಠರು! ಸಿದ್ಧಲಿಂಗರು ತಮ್ಮ ಗುರುಪಟ್ಟಾವಳಿಯನ್ನು ತಮ್ಮ ಒಂದು ವಚನದಲ್ಲಿ ನಿರೂಪಿಸಿದ್ದಾರೆ.

"ಅನಾದಿ ಗಣೇಶ್ವರನ ಶಿಷ್ಯ ಆದಿಗಣೇಶ್ವರ, ಆದಿಗಣೇಶ್ವರನ ಶಿಷ್ಯ ನಿರ್ಮಾಯನೆಂಬ ಗಣೇಶ್ವರ, ನಿರ್ಮಾಯನೆಂಬ ಗಣೇಶ್ವರನ ಶಿಷ್ಯ ನಿರಂಜನನೆಂಬ ಗಣೇಶ್ವರ, ನಿರಂಜನನೆಂಬ ಗಣೇಶ್ವರನ ಶಿಷ್ಯ ಜ್ಞಾನಾನಂದ ಗಣೇಶ್ವರ, ಜ್ಞಾನಾನಂದನೆಂಬ ಗಣೇಶ್ವರನ ಶಿಷ್ಯ ಆತ್ಮಗಣೇಶ್ವರ, ಆತ್ಮಗಣೇಶ್ವರನ ಶಿಷ್ಯ ಅಧ್ಯಾತ್ಮಗಣೇಶ್ವರ, ಅಧ್ಯಾತ್ಮಗಣೇಶ್ವರನ ಶಿಷ್ಯ ರುದ್ರನೆಂಬ ಗಣೇಶ್ವರ, ರುದ್ರನೆಂಬ ಗಣೇಶ್ವರನ ಶಿಷ್ಯ ಬಸವಪ್ರಭುದೇವರು, ಬಸವಪ್ರಭುದೇವರ

ಶಿಷ್ಯ ಆದಿಲಿಂಗದೇವರು, ಆದಿಲಿಂಗದೇವರ ಶಿಷ್ಯ ಚನ್ನವೀರೇಶ್ವರದೇವರು, ಚನ್ನವೀರೇಶ್ವರದೇವರ ಶಿಷ್ಯ ಹರದನಹಳ್ಳಿಯ ಗೋಸಲದೇವರು, ಹರದನಹಳ್ಳಿಯ ಗೋಸಲದೇವರ ಶಿಷ್ಯ ಶಂಕರದೇವರು, ಶಂಕರದೇವರ ಶಿಷ್ಯ ದಿವ್ಯಲಿಂಗದೇವರು, ದಿವ್ಯಲಿಂಗದೇವರ ಶಿಷ್ಯರು ಚನ್ನಬಸವೇಶ್ವರದೇವರು, ಈ ಚನ್ನಬಸವೇಶ್ವರ ದೇವರ ಕರಕಮಲದಲ್ಲಿ ಉತ್ಪತ್ತಿಯಾದ ಶಿಶು ಸಿದ್ಧಲಿಂಗ ನಾನಯ್ಯ. ಹೀಗೆ ಅನಾದಿವಿಡಿದು ಬಂದ ಗುರು, ಅನಾದಿವಿಡಿದು ಬಂದ ಲಿಂಗ, ಅನಾದಿವಿಡಿದು ಬಂದ ಜಂಗಮ, ಅನಾದಿವಿಡಿದು ಬಂದ ಪಾದೋದಕ ಪ್ರಸಾದ, ಅನಾದಿವಿಡಿದು ಬಂದ ಭಕ್ತಿ, ಜ್ಞಾನ, ವೈರಾಗ್ಯ, ಅನಾದಿವಿಡಿದು ಬಂದ ಪ್ರಸಿದ್ಧವಾದ ವೀರಶೈವಾಚಾರ ಸಂಪತ್ತು, ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ''—ಎಂದು ಅವರು ತಮ್ಮ ಪ್ರಾಚೀನ ಗುರುಪರಂಪರೆಯನ್ನು ಸ್ಪಷ್ಟವಾಗಿ ಹೇಳಿರುತ್ತಾರೆ. ಅವರು ಈ ವಚನದಲ್ಲಿ ಗುರುಲಿಂಗಜಂಗಮ, ಪಾದೋದಕಪ್ರಸಾದ ಭಕ್ತಿಜ್ಞಾನ ವೈರಾಗ್ಯ, ವೀರಶೈವಾಚಾರ ಸಂಪತ್ತು ಮೊದಲಾದ ವೀರಶೈವ ತತ್ತ್ವ ಹೃದಯವನ್ನು ಚಿತ್ರಿಸಿರುತ್ತಾರೆ. ಆದ್ದರಿಂದ ಅವರೂ, ಅವರ ಗುರುಪರಂಪರೆಯೂ ವೀರಶೈವರೆಂಬುದು ವ್ಯಕ್ತವಾಗುತ್ತದೆ. ಇದರಲ್ಲಿ ಅಲ್ಲಮ, ಚನ್ನಬಸವಣ್ಣ, ಸಿದ್ಧರಾಮ ಮೊದಲಾದ ಮಹಾಶರಣರ ಹೆಸರುಗಳಿಲ್ಲ. ಈ ಮೂವರೂ ವಿರಕ್ತ ಸಂಪ್ರದಾಯದಲ್ಲಿ ಬರುತ್ತಾರೆ. ಹರದನಹಳ್ಳಿಯ ಪ್ರಾಚೀನ ಮಠ ವೀರಶೈವದಲ್ಲಿ ಸಿದ್ಧಸಂಪ್ರದಾಯದ ಮಠವೆಂದು ನಿರ್ಧರಿಸಬಹುದು. ಈ ಪೀಠದ ಪ್ರಪ್ರಥಮ ಗುರು ಅನಾದಿ ಗಣೇಶ್ವರ, ಈ ಮಠ ಯಾವಾಗ ಸ್ಥಾಪನೆಯಾಯಿತೆಂಬ ವಿಚಾರ ವೀರಶೈವ ವಾಙ್ಮಯದಿಂದ ತಿಳಿದುಬರುತ್ತದೆ. ಹಿಂದೆ ವೀರಶೈವ ಹರದರು

ಎಂದರೆ ವರ್ತಕರು ದಕ್ಷಿಣ ಮಧುರೆಯತ್ತ ವ್ಯಾಪಾರ ಮಾಡಲು ಅಡಕೆಯ ಹೇರುಗಳನ್ನು ಎತ್ತುಗಳ ಮೇಲೆ ಹೇರಿಕೊಂಡು ಈ ಮಾರ್ಗವಾಗಿ ಹೋಗಿಬರುತ್ತಿದ್ದರು. ಒಮ್ಮೆ ವರ್ತಕರು ಹರದನ ಹಳ್ಳಿಯಿರುವ ಸ್ಥಳದಲ್ಲಿ ಬೀಡುಬಿಟ್ಟು ಅಡುಗೆ ಮಾಡಿಕೊಳ್ಳಲು ಅಣಿ ಮಾಡುತ್ತಿದ್ದರು. ಒಲೆಗಳನ್ನು ಜೋಡಿಸಲು ಸೇವಕರು ಕಲ್ಲುಗಳನ್ನು ಹುಡುಕಿತಂದರು. ಅಲ್ಲಿ ಒಂದು ಕಲ್ಲು ನೆಲದಲ್ಲಿ ಅರ್ಧ ಹೂತುಕೊಂಡಿತ್ತು. ಅವರು ಆ ಕಲ್ಲಿಗೆ ಇನ್ನೆರಡು ಕಲ್ಲು ಗುಂಡುಗಳನ್ನು ಹೊಂದಿಸಿ ಒಲೆ ಮಾಡಿದರು, ಬೆಂಕಿ ಹೊತ್ತಿಸಿ ದರು. ಆಗ ಒಲೆಯ ಮೂಲಶಿಲೆಯಿಂದ ಅಮೃತ ಉಕ್ಕಿಬಂದು ಒಲೆ ಆರಿಹೋಯಿತು! ಆ ವರ್ತಕರು ಆಶ್ಚರ್ಯಪಟ್ಟರು! ಅದೊಂದು ಪ್ರಾಚೀನ ಶಿವಲಿಂಗವೆಂದು ಅವರಿಗೆ ಅರಿವಾಯಿತು. ಅವರು ಭಯಭಕ್ತಿಯಿಂದ ಆ ಶಿವಲಿಂಗವನ್ನು ಅರ್ಚಿಸಿ ಪೂಜಿಸಿ ದರು. ಅವರು ಆ ಶಿವಲಿಂಗವನ್ನು ದಿವ್ಯಲಿಂಗೇಶ್ವರನೆಂದೂ ಕರೆ ದರು. ಅದು ಅಮೃತಲಿಂಗೇಶ್ವರನೆಂದು ಪ್ರಸಿದ್ಧವಾಯಿತು. ಆ ವರ್ತಕರು ಅಮೃತಲಿಂಗೇಶ್ವರನಿಗೆ ಗುಡಿಗೋಪುರ ಪ್ರಾಕಾರ ಗಳನ್ನು ಕಟ್ಟಿಸಿ, ದೇವಾಲಯದಲ್ಲಿ ನಿತ್ಯಪೂಜೆ, ನೈವೇದ್ಯ, ನಂದಾದೀಪ, ವಾದ್ಯ, ನೃತ್ಯಸೇವಾಕೈಂಕರ್ಯಗಳನ್ನು ನಡೆಸಲು ಆ ಮಠದ ಗುರುಗಳಿಗೆ ವಹಿಸಿದರು. ಆ ಮಠದ ಮೊದಲನೆಯ ಗುರುವೇ ಅನಾದಿಗಣೇಶ್ವರರು. ಇದೊಂದು ಪುರಾವೃತ್ತ. ಸಿದ್ಧ ಲಿಂಗರಿಗಿಂತ ಹಿಂದೆ ಹದಿನೈದು ಮಂದಿ ಈ ಮಠದ ಗುರುಗಳಾಗಿ ದ್ದರೆಂದು ಅವರ ವಚನದಿಂದ ತಿಳಿದುಬರುತ್ತದೆ. ಸಿದ್ಧಲಿಂಗರು (೧೪೮೦) ಹದಿನೈದನೆಯ ಶತಮಾನದಲ್ಲಿದ್ದರೆಂದು ಇತಿಹಾಸದಿಂದ ನಿರ್ಧರವಾಗುತ್ತದೆ. ಇದನ್ನು ಶಾಸನಗಳೂ ದೃಢಪಡಿಸುತ್ತವೆ. ಇವರು ಸುಮಾರು ತೊಂಬತ್ತು ವರ್ಷಕಾಲ ಬದುಕಿದ್ದರೆಂದು

ಹೇಳಬಹುದು. ಆದ್ದರಿಂದ ಸಿದ್ಧಲಿಂಗರು ಕ್ರಿ.ಶ. ೧೪೧೦ರಲ್ಲಿ ಜನಿಸಿ ಸುಮಾರು ಕ್ರಿ.ಶ.೧೫೦೦ರಲ್ಲಿ ಲಿಂಗೈಕ್ಯರಾಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಸುಮಾರು ಕ್ರಿ.ಶ. ೧೪೩೫ರಲ್ಲಿ ಇವರು ಗುರುಪಟ್ಟವನ್ನು ಸ್ವೀಕರಿಸಿದರೆಂದು ನಂಬಬಹುದು. ಇವರ ಹಿಂದಿನ ಹದಿನೈದು ಜನ ಗುರುಗಳಲ್ಲಿ ಒಬ್ಬೊಬ್ಬರೂ ಸರಾಸರಿ ೩೦ ವರ್ಷಕಾಲ ಜೀವಿಸಿದ್ದರೆಂದರೆ ಸುಮಾರು ೪೫೦ ವರ್ಷಗಳ ಹಿಂದೆಯೇ ಎಂದರೆ ಕ್ರಿ.ಶ. ೯೫೦ರಲ್ಲಿ ಅನಾದಿ ಗಣೇಶ್ವರರು ಈ ಮಠದ ಮೊದಲನೆಯ ಗುರುವಾದರೆಂದು ಊಹಿಸಬಹುದು. ತಮಿಳುನಾಡಿನಲ್ಲಿ ಅರುವತ್ತುಮೂರು ಪುರಾತನರ ಕಾಲ ಆದುವರೆಗೆ ಮುಗಿದು ಸುಮಾರು ೧೫೦ ವರ್ಷಗಳಾಗಿತ್ತು. ಆದ್ದರಿಂದ ಇದು ಅತ್ಯಂತ ಪ್ರಾಚೀನ ಗುರುಪೀಠವೆಂಬುದರಲ್ಲಿ ಸಂಶಯವಿಲ್ಲ. ಹತ್ತನೆಯ ಶತಮಾನದಲ್ಲಿಯೇ ಹರದನಹಳ್ಳಿ ವೀರಶೈವಧರ್ಮಕ್ಷೇತ್ರವಾಗಿತ್ತು. ವೀರಶೈವಧರ್ಮಕೇಂದ್ರವಾಗಿತ್ತು. ಅನಾದಿ ಗಣೇಶ್ವರರು ಗೋಹೆ ಎಂದರೆ ಈಗಿನ ಗೋವಾದಿಂದ ಬಂದು ವೀರಶೈವ ಹರದರ ಪ್ರಾರ್ಥನೆಯಂತೆ ಹರದನಹಳ್ಳಿಯಲ್ಲಿ ದಿವ್ಯಲಿಂಗೇಶ್ವರ ದೇವಾಲಯದ ಮಠದಲ್ಲಿ ನೆಲಸಿದರು. ಇವರ ಸಮಾಧಿ ಗೋವಾದಲ್ಲಿದೆ. ಇವರ ತರುವಾಯ ಆದಿಗಣೇಶ್ವರರು ಈ ಮಠದ ಸ್ವಾಮಿಯಾದರು. ಇವರ ಸಮಾಧಿ ಎಳಂದೂರು ಪ್ರಾಂತದಲ್ಲಿರುವ ಪ್ರಭುಸ್ವಾಮಿ ಬೆಟ್ಟದಲ್ಲಿದೆ. ಆವರ ತರುವಾಯ ನಿರ್ಮಾಯಗಣೇಶ್ವರರು ಈ ಪೀಠದ ಅಧಿಪತಿಯಾದರು. ಇವರ ಸಮಾಧಿ ಕೊಳ್ಳೇಗಾಲ ಪ್ರಾಂತದ ಮಹದೇಶ್ವರನ ಬೆಟ್ಟದ ಮೇಲಿದೆ. ಇವರೇ ಮಲೆಯ ಮಹದೇಶ್ವರರು. ಈ ಪರಂಪರೆಯಲ್ಲಿ ಹನ್ನೆರಡನೆಯವರೇ ಗೋಸಲಸಿದ್ಧೇಶ್ವರರು. ಇವರು ತುಮಕೂರು ಬಳಿಯ ಸಿದ್ಧ

ಗಂಗಾಗಿರಿಯಲ್ಲಿ ತಪಸ್ಸು ಮಾಡಿದರು. ಅವರ ಜೊತೆಯಲ್ಲಿ ನೂರೊಂದು ವಿರತರು ಈ ಬೆಟ್ಟದ ಬೇರೆ ಬೇರೆ ಗವಿಗಳಲ್ಲಿ ತಪಸ್ಸು ಮಾಡಿದರು. ಗೋಸಲ ಸಿದ್ಧೇಶ್ವರರ ತಪೋಬಲದಿಂದ ಈ ಬೆಟ್ಟದ ಗುಹೆಯೊಂದರಲ್ಲಿ ತಮ್ಮ ಇಷ್ಟಲಿಂಗಾಭಿಷೇಕಕ್ಕಾಗಿ ಗಂಗೋದಯವಾಯಿತಂತೆ! ಅಂದಿನಿಂದ ಈ ಬೆಟ್ಟವನ್ನು ಸಿದ್ಧಗಂಗೆ ಎಂದು ಕರೆಯುತ್ತಾರೆ. ಇವರ ಗದ್ದುಗೆ ಸಿದ್ಧಗಂಗೆಯಲ್ಲಿದೆ. ಅವರ ಮಠವೂ ಅಲ್ಲಿ ನಿರ್ಮಾಣವಾಯಿತು. ಹರಡನಹಳ್ಳಿಯ ಹದಿಮೂರನೆಯ ಗುರು ಶಂಕರಸಿದ್ಧೇಶ್ವರರು. ಇವರು ವಿಜಯನಗರದ ಪ್ರೌಢದೇವರಾಯನನ್ನು ಅನುಗ್ರಹಿಸಿ, ಅಲ್ಲಿ ನೂರೊಂದು ವಿರಕ್ತರಿಗೆ ತತ್ತ್ವೋಪದೇಶ ಮಾಡಿದರು. ಇವರ ಗದ್ದುಗೆ ಕೊರಟಗೆರೆಯ ಹತ್ತಿರ ಸಿದ್ಧರ ಬೆಟ್ಟದಲ್ಲಿದೆ. ಈಗಲೂ ಅದೊಂದು ಯಾತ್ರಾಸ್ಥಳ. ಹದಿನೈದನೆಯ ಪಟ್ಟಭದ್ರರು ಗೋಸಲಚನ್ನಬಸವೇಶ್ವರರು. ಇವರು ಬಹಳ ಕಾಲ ಸಿದ್ಧಗಂಗೆಯಲ್ಲಿ ಶಿವಯೋಗನಿರತರಾಗಿದ್ದರು. ಅನಂತರ ಅವರು ಗುಬ್ಬಿಯಲ್ಲಿ ಕೆಲವು ಕಾಲ ಅನುಷ್ಠಾನ ಮಾಡಿದರು. ಆ ಸ್ಥಳ ಗುಬ್ಬಿಯಿಂದ ವಾಯುವ್ಯ ದಿಕ್ಕಿಗೆ ಸುಮಾರು ೧ ಕಿಲೊಮೀಟರ್ ದೂರದಲ್ಲಿದೆ. ಅವರ ಸಮಾಧಿ ಗುಬ್ಬಿಯಲ್ಲಿದೆ. ಈ ಸಿದ್ಧಗುರುಪರಂಪರೆಯಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರು ಹದಿನಾರನೆಯ ಗುರು.

೩

ಸಿದ್ಧಲಿಂಗರ ಕಾಲಕ್ಕಿಂತಲೂ ಸುಮಾರು ಮೂನ್ನೂರು ವರ್ಷಗಳ ಹಿಂದೆಯೇ ಬಸವಣ್ಣನವರು ಪ್ರಾಚೀನ ವೀರಶೈವ ಧರ್ಮವನ್ನು ಉದ್ಧಾರ ಮಾಡಿದ್ದರು. ಶಿವಶರಣರೂ, ಶಿವಶರಣೆಯರೂ ಕನ್ನಡದಲ್ಲಿ ಲಕ್ಷೋಪಲಕ್ಷ ವಚನಗಳನ್ನು ಬಸವಣ್ಣ

ನವರ ಕಾಲದಲ್ಲಿ ಬರೆದರು. ಅಂದು ಅಪಾರಸಾಹಿತ್ಯ ಸೃಷ್ಟಿಯಾಯಿತು. ವಚನಗಳು ಕನ್ನಡದ ಉಪನಿಷತ್ತುಗಳೆಂಬ ಗೌರವವನ್ನು ಪಡೆದುವು. ಕಲ್ಯಾಣಕ್ರಾಂತಿಯಾಯಿತು. ಶರಣರು ದಿಕ್ಕುದಿಕ್ಕಿಗೆ ಚದರಿಹೋದರು. ಅನೇಕ ಮೂಲಗ್ರಂಥಗಳು ನಾಡಿನಲ್ಲಿ ನಾನಾ ಗುಡಿಗುಂಡಾರಗಳಲ್ಲಿ ಅಡಗಿದುವು. ಅನೇಕ ಓಲೆಯ ಕಟ್ಟುಗಳು ನಾಶವಾಗಿರಲೂಬಹುದು. ಅಂದು ಸೃಷ್ಟಿಯಾದ ವಚನಸಾಹಿತ್ಯ ಸಮಗ್ರವಾಗಿ ಒಂದೆಡೆಯಲ್ಲಿ ದೊರೆಯುವಂತಿರಲಿಲ್ಲ. ಐತಿಹಾಸಿಕ ದೃಷ್ಟಿಯಿಂದ ಭಾರತದಲ್ಲಿ ಮೊಟ್ಟಮೊದಲು ಮಾನವಸಮಾಜದಲ್ಲಿ ವಿಚಾರಕ್ರಾಂತಿಯನ್ನು ಗೌತಮಬುದ್ಧ ಆರಂಭಿಸಿದನು. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಆ ವಿಚಾರಕ್ರಾಂತಿಯನ್ನು ವ್ಯಾಪಕವಾಗಿ ರೂಪಿಸಿದರು. ಹದಿನೈದನೆಯ ಶತಮಾನದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರು ಮತ್ತೊಮ್ಮೆ ವಿಚಾರಕ್ರಾಂತಿಯನ್ನು ಸಮಾಜದಲ್ಲಿ ಶಾಂತರೀತಿಯಿಂದ ನಡೆಸಿದರು. ದಕ್ಷಿಣದಲ್ಲಿ ಕಾವೇರಿಯಿಂದ ಉತ್ತರದಲ್ಲಿ ತುಂಗಭದ್ರಾನದಿಯವರೆಗೆ ಸಿದ್ಧಲಿಂಗರ ಶಿಷ್ಯವೃಂದ ವಿಶೇಷವಾಗಿ ಬೆಳೆಯಿತು. ದೇಶದ ನಾನಾ ಕಡೆಗಳಿಂದ ವಿರತರೂ ಜಂಗಮರೂ ಬಂದು ಹರದನಹಳ್ಳಿಯಲ್ಲಿ ಸಿದ್ಧಲಿಂಗರ ಸನ್ನಿಧಿಯಲ್ಲಿ ಸೇರಿದರು. ಶಿವತತ್ತ್ವ ಸಂಗೋಷ್ಠಿಯಲ್ಲಿ ತತ್ತ್ವಜಿಜ್ಞಾಸೆ ನಡೆಯುತ್ತಿತ್ತು. ಅವರ ಸಂಗಡ ೭೦೦ ವಿರತರೂ ೩೦೦೦ ಜಂಗಮರೂ ಶಿಷ್ಯವೃತ್ತಿಯಲ್ಲಿದ್ದರು. ಹರದನಹಳ್ಳಿ ದಕ್ಷಿಣ ಕರ್ನಾಟಕದ ಕಲ್ಯಾಣದಂತೆ ಶೋಭಿಸಿತು. ಸಿದ್ಧಲಿಂಗರ ಮಠ ಬಸವಣ್ಣನವರ ಮಹಮನೆಯಂತಿತ್ತು. ದಿವ್ಯಲಿಂಗೇಶ್ವರ ದೇವಾಲಯವೇ ಶಿವಾನುಭವಮಂಟಪವಾಯಿತು. ಸಿದ್ಧಲಿಂಗರು ಕಲ್ಯಾಣದ ಶರಣಧರ್ಮವನ್ನು ಮನಸಾರೆ ಮೆಚ್ಚಿ

ದ್ದರು. "ಸದ್ರೂಪವೇ ಸಂಗನ ಬಸವಣ್ಣನೋಡಾ, ಚಿದ್ರೂಪವೇ ಚೆನ್ನಬಸವಣ್ಣ ನೋಡಾ, ಆನಂದಸ್ವರೂಪವೇ ಪ್ರಭುದೇವರು ನೋಡಾ. ಇದು ಕಾರಣ ಸದ್ರೂಪನಾದ ಬಸವಣ್ಣನೇ ಗುರು, ಚಿದ್ರೂಪನಾದ ಚನ್ನಬಸವಣ್ಣನೇ ಲಿಂಗ, ಆನಂದಸ್ವರೂಪನಾದ ಪ್ರಭುದೇವರೇ ಜಂಗಮನೋಡಾ. ನಿತ್ಯನಿರಂಜನಪರತತ್ತ್ವ ತಾನೇ ಮೂರು ತೆರನಾಯಿತ್ತುನೋಡಾ. ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ" ಎಂದು ಸಿದ್ಧಲಿಂಗರು ತುಂಬು ಭಕ್ತಿಯಿಂದ ಬಸವಣ್ಣ, ಚನ್ನಬಸವಣ್ಣ ಮತ್ತು ಪ್ರಭುದೇವರನ್ನು ಗುರುಲಿಂಗಜಂಗಮ ಸ್ವರೂಪರೆಂದು ನಿರೂಪಿಸಿದ್ದಾರೆ. ಬಸವಣ್ಣನವರಿಗಿಂತಲೂ ಹಿಂದೆ ಆಗಮೋಕ್ತ ವೀರಶೈವವಿತ್ತು. ವೀರಶೈವ ಪಂಚ ಆಚಾರ್ಯರು ಶಿವಲಿಂಗೋದ್ಭವರೆಂದು ಶಿವಾಗಮಗಳಲ್ಲಿ ಹೇಳಿದೆ. ಈ ತತ್ತ್ವಾರ್ಥ ಕಾಲಕ್ರಮದಲ್ಲಿ ನಿಜಾರ್ಥವನ್ನು ಕಳೆದುಕೊಂಡಿತು. ಬಹುಶಃ ಸಿದ್ಧಲಿಂಗರ ಕಾಲದಲ್ಲಿ ಈ ತತ್ತ್ವಾರ್ಥ ತುಂಬ ಜಿಜ್ಞಾಸೆಗೆ ಎಡೆಗೊಟ್ಟಿತ್ತೇನೋ ! ಆದ್ದರಿಂದಲೇ ಅವರು ಈ ಘನತತ್ತ್ವವನ್ನು ತುಂಬ ಸಮಂಜಸವಾಗಿ ನಿರೂಪಿಸಿ ಪರಮೋಪಕಾರ ಮಾಡಿರುತ್ತಾರೆ. ಶಿವಭಕ್ತನಿಗೂ ಶಿವನಿಗೂ ಭೇದವಿಲ್ಲವೆಂಬ ತತ್ತ್ವವನ್ನು ಅವರು ಅರಿತು ಆಚರಿಸಿ ಬೋಧಿಸಿದರು. ಸೂರ್ಯನಿಂದ ಹೊರಟ ಕಿರಣಗಳಿಗೂ ಸೂರ್ಯನಿಗೂ ಭಿನ್ನವುಂಟೆ ? ಆದರಂತೆಯೇ ಜ್ಯೋತಿಯಿಂದ ಜ್ಯೋತಿ ಉದಯಿಸಿದಂತೆ ಮಹಾಲಿಂಗದಲ್ಲಿ ಉದಯಿಸಿದ ಶರಣರಿಗೂ ಮಹಾಲಿಂಗಕ್ಕೂ ಭಿನ್ನವುಂಟೆ? ಲಿಂಗಮುಖದಿಂದ ಉದಯವಾದ ಶರಣರು ಲಿಂಗರೂಪರಲ್ಲದೆ ಬೇರೆ ರೂಪಾಗಲಾರರು. ಲಿಂಗವೆಂದರೆ ಪರಬ್ರಹ್ಮ ಅಥವಾ ಪರಶಿವನೆಂದು ವೀರಶೈವಧರ್ಮ ನಂಬುತ್ತದೆ. ಲಿಂಗಾಂಗ ಸಮರಸ

ತತ್ತ್ವನಿಷ್ಠರೆಲ್ಲರೂ ಲಿಂಗೋದ್ಭವರು ಎಂಬ ತತ್ತ್ವವನ್ನು ಸಿದ್ಧ ಲಿಂಗರು ಅತ್ಯಂತ ಸೂಕ್ಷ್ಮರೀತಿಯಲ್ಲಿ ನಿರೂಪಿಸಿದ್ದಾರೆ. "ಆದಿ ಯಲ್ಲಿ ಶಿವತತ್ತ್ವದಲ್ಲಿ ರೇಣುಕನುದಯವಾಗದಿರ್ದಡೆ ಇಲ್ಲಿ ಶಿವ ಲಿಂಗದಲ್ಲಿ ಉದಯವಾದ ಪರಿಯೆಂತೋ?'' ಎಂದು ಸಿದ್ಧಲಿಂಗರು ನಿಗೂಢ ಶಿವತತ್ತ್ವ ಸ್ವರೂಪವನ್ನು ಸ್ಫಟಿಕ ನಿರ್ಮಲವಾಣಿಯಲ್ಲಿ ಸಮೀಕ್ಷಿಸಿದ್ದಾರೆ. ಪಂಚ ಆಚಾರ್ಯರು ಮಾತ್ರವೇ ಲಿಂಗೋ ದ್ಭವರೆಂಬ ಅಭಿಮಾನ ಸಲ್ಲದು. ಶಿವಾಗಮಯುಗದಲ್ಲಿ ಪಂಚ ಆಚಾರ್ಯರಿಗೆ ಅನ್ವಯಿಸಿದ ತತ್ತ್ವ ಶರಣಯುಗದಲ್ಲಿ ಎಲ್ಲ ಶಿವ ಶರಣರಿಗೂ ಅನ್ವಯವಾಗಬೇಕಾದ ತತ್ತ್ವವೇ ಆಗಿದೆಯೆಂಬು ದನ್ನು ಯಾರೂ ನಿರಾಕರಿಸುವಂತಿಲ್ಲ. ಈ ತತ್ತ್ವ ಸಮನ್ವಯ ಭಾವನೆಯಿಂದ ಸಮಾಜದಲ್ಲಿ ಹೊಸದೃಷ್ಟಿ ಉದಯಿಸಿತು ; ಸಮಾಜ ವಿಕಾಸವಾಯಿತು. ಸಿದ್ಧಲಿಂಗರು ವೀರಶೈವ ಧರ್ಮ ಭೂಷಣರಾದರು.

೪

ಸಿದ್ಧಲಿಂಗರು ಧರ್ಮೋದ್ಧಾರ ದೃಷ್ಟಿಯಿಂದ ದೇಶಪರ್ಯಟನ ಮಾಡಿದರು. ಅವರ ಶಿಷ್ಯರಲ್ಲಿ ಬೋಳಬಸವೇಶ್ವರ ಅಥವಾ ಶಿವ ಪೂಜೆಯಾರ್ಯ, ಗೂಳೂರು ಸಿದ್ಧವೀರ, ಗುಮ್ಮಳಾಪುರದ ಸಿದ್ಧ ಲಿಂಗ, ಸ್ವತಂತ್ರ ಸಿದ್ಧಲಿಂಗ, ಕಂಬಳಿಯ ದೇವ, ಗಗನದಾರ್ಯ, ಕಟ್ಟಿಗೆ ಹಳ್ಳಿಸಿದ್ಧಲಿಂಗ, ಮುರಿಗೆಯ ಶಾಂತವೀರ, ಸಿದ್ಧಮಲ್ಲೇಶ, ಎಡತೊರೆಯ ಗುರುಸಿದ್ಧವೀರಣ್ಣೊಡೆಯ, ರೇವಣಸಿದ್ಧ, ಘನ ಲಿಂಗದೇವ, ಸಂಪಾದನೆಯ ಸಿದ್ಧವೀರ, ಮರುಳಸಿದ್ಧ, ಚಂದ್ರ ಶೇಖರ, ಶಾಂತಮಲ್ಲಿಕಾರ್ಜುನ, ಪರ್ವತೇಶ್ವರ, ಬತ್ತಲೆಯದೇವ, ಸಂಪಿಗೆಯ ರಾಚವಟ್ಟದೇವ, ಸಪ್ಪೆಯಾರ್ಯ, ಸೋಮಶೇಖರ ಶಿವಯೋಗಿ, ಚಿಟ್ಟಗಯತಿ, ಶೀಲವಂತಯ್ಯ ಮೊದಲಾದವರು

ಪ್ರಮುಖರಾಗಿದ್ದರು. ಅವರ ಕಾಲದಲ್ಲಿದ್ದ ೭೦೦ ವಿರತರ ಹೆಸರು ಗಳೆಲ್ಲ ನಮಗೆ ಎಲ್ಲಿಯೂ ದೊರೆಯುವುದಿಲ್ಲ. ಸಿದ್ಧಲಿಂಗರು ಕನ್ಯಾಕುಮಾರಿಯಿಂದ ಹಿಡಿದು ಹಿಮವತ್ಕೇತಾರದವರೆಗೂ ಸಂಚರಿಸಿದರು. ಅವರು ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ಅಲ್ಲಲ್ಲಿ ಪವಾಡಗಳನ್ನು ಮೆರೆದರು. ಸೌರಾಷ್ಟ್ರ, ಉಜ್ಜಯಿನಿ, ಹಿಮವತ್ಕೇತಾರ, ಕೊಲ್ಲಿಪಾಕಿ, ಕಾಶಿ, ಧ್ರಾಕ್ಷಾಧಾಮ, ತ್ರಿಯಂಬಕ, ಶ್ರೀಶೈಲ, ಗೋಕರ್ಣ, ಮಹಾಬಲೇಶ್ವರ, ಹಂಪೆ, ಶಿವಗಂಗೆ, ಸಿದ್ಧಗಂಗೆ, ಪೊನ್ನಾಂಬಲ, ಕಾಳಹಸ್ತಿ, ಕಂಚಿ ಚಿದಂಬರ, ಅರುಣಾಚಲ, ರಾಮೇಶ್ವರ, ಕಗ್ಗೆರೆ ಮೊದಲಾದ ಅನೇಕ ಧರ್ಮಕ್ಷೇತ್ರಗಳನ್ನು ತಮ್ಮ ಶಿವಯೋಗ ಮಹಿಮೆಯಿಂದ ಪಾವನಗೊಳಿಸಿದರು. ಅವರು ದೇಶಪರ್ಯಟನ ಮಾಡಲು ಹರ ದನಹಳ್ಳಿಯ ಮಠದಿಂದ ಹೊರಟ ಕಾಲದಲ್ಲಿ ಅವರಿಗೆ ಸುಮಾರು ೪೫ ವರ್ಷ ವಯಸ್ಸಾಗಿತ್ತು. ಅವರು ತಮಿಳು ನಾಡಿನಲ್ಲಿ ಅರುಣಾ ಚಲದಲ್ಲಿ ಅರುಣಾಚಲೇಶ್ವರನ ಸನ್ನಿಧಿಯಲ್ಲಿ ಬಹಳ ಕಾಲ ಶಿವ ಯೋಗನಿರತರಾಗಿದ್ದರು. ಆ ದೇವಾಲಯದ ಭಕ್ತವೃಂದ ಅವರ ಧರ್ಮೋಪದೇಶದಿಂದ ಸಂತುಷ್ಟಿಗೊಂಡಿತು. ಆ ನಗರದ ಪ್ರಭು ಆ ದೇವಾಲಯದ ಅಮೂಲ್ಯ ಮುತ್ತಿನ ಪಂಚಪಾವಡವನ್ನು ಸಿದ್ಧಲಿಂಗರಿಗೆ ಭಕ್ತಿಯಿಂದ ಸಮರ್ಪಿಸಿದನು. ಅವರ ವೈರಾಗ್ಯ ಹೃದಯದಲ್ಲಿ ಆ ಮುತ್ತಿನ ಕಂತೆ ಮುಳ್ಳಿನ ಕಂತೆಯಾಯಿತು. ಅವರು ಅದನ್ನು ದೀನದಲಿತರಿಗೆ ಹರಿದುಹಂಚಿಕೊಟ್ಟರು. ಸಿದ್ಧ ಲಿಂಗರಲ್ಲಿ ಹೊನ್ನಿನಾಸೆಯಿರಲಿಲ್ಲ; ಮಣ್ಣಿನ ಮಮತೆಯಿರಲಿಲ್ಲ; ಹೆಣ್ಣಿನ ಮೋಹವಿರಲಿಲ್ಲ. ಅವರು ಪರಮನಿರಂಜನಸಿದ್ಧರಾಗಿ ದ್ದರು. ಅವರು ತಮ್ಮ ಜೊತೆಯಲ್ಲಿದ್ದ ಎಲ್ಲ ವಿರತರನ್ನೂ ಜಂಗಮ ರನ್ನೂ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಧರ್ಮಪ್ರಚಾರ

ಮಾಡಲು ಕಳಿಸಿಬಿಟ್ಟರು. ಅವರ ಸಂಗಡ ಬೋಳಬಸವೇಶ್ವರ, ಗೂಳೂರು ಸಿದ್ಧವೀರಣಾರ್ಯ, ಗುಮ್ಮಳಾಪುರದ ಸಿದ್ಧ ಲಿಂಗಾರ್ಯ, ಸ್ವತಂತ್ರ ಸಿದ್ಧಲಿಂಗದೇವರು, ಚಿಟ್ಟಿಗದೇವರು ಎಂಬ ಐದು ಜನ ಶಿಷ್ಯರು ಮಾತ್ರ ಉಳಿದರು. ಇತರರೆಲ್ಲಾ ತಮತಮಗೆ ಇಷ್ಟ ಬಂದ ಕಡೆಗಳಲ್ಲಿ ಮಠಗಳನ್ನು ಕಟ್ಟಿಸಿಕೊಂಡು ಧರ್ಮಪ್ರಚಾರ ಮಾಡುತ್ತಿದ್ದರು. ಅವರಲ್ಲಿ ಕೆಲವರು ವಚನ ಗಳನ್ನು ರಚಿಸಿದ್ದಾರೆ, ಹಾಡು, ಪದ, ತ್ರಿಪದಿ, ಸ್ತೋತ್ರಗಳನ್ನು ಬರೆದಿದ್ದಾರೆ. ಅನೇಕ ಹೊಸ ಮಠಗಳು ಕನ್ನಡನಾಡಿನಲ್ಲಿ ಉದಯವಾದುವು. ದಕ್ಷಿಣಕರ್ಣಾಟಕದಲ್ಲಿ ಅಸದೃಶವಾದ ಧರ್ಮ ಕ್ರಾಂತಿ ಸಮಾಜದಲ್ಲಿ ನಡೆಯಿತು. ಹರದನಹಳ್ಳಿಯ ಗುರುಸ್ಥಲದ ಸಿದ್ಧಸಂಪ್ರದಾಯದ ಮಠ ಕೇಂದ್ರಧರ್ಮಪೀಠವಾಯಿತು. ಅವರ ಕಾಲದಲ್ಲಿ ಎಳಂದೂರು, ಧನುಗೂರು, ಹಲಗೂರು, ಸೋಸಲೆ, ಮೂಗೂರು, ಸುತ್ತೂರು, ಕುಂದೂರು, ತಲಕಾಡು, ಹುಲ್ಲಹಳ್ಳಿ, ಕಳಲೆ–ಮೊದಲಾದ ಮಠಗಳು ಧರ್ಮಜ್ಯೋತಿಯನ್ನು ಬೆಳಗಿ ದುವು. ದಕ್ಷಿಣದಲ್ಲಿ 'ಆ ಸಮುದ್ರಪರ್ಯಂತ' ಸಿದ್ಧಲಿಂಗರ ಧರ್ಮಪ್ರಭಾವ ಮೆರೆಯಿತು. ಅನೇಕ ರಾಜರು ವೀರಶೈವವನ್ನು ಅವಲಂಬಿಸಿದರು; ವೀರಶೈವವನ್ನು ಪರಿಪೋಷಿಸಿದರು. ಅಸಂಖ್ಯಾತ ಗಂಗಡಿಕಾರ ಒಕ್ಕಲಿಗರ ಪಂಗಡದವರು ಲಿಂಗಧಾರಿಗಳಾಗಿ ಶಿವ ಭಕ್ತರಾದರು. ಹರದನಹಳ್ಳಿಯ ಮಠದ ಪ್ರಭಾವದಿಂದ ಆದುವರೆ ಗಾಗಲೇ ವಿಜಯನಗರದ ಪ್ರೌಢದೇವರಾಯ ವೀರಶೈವಧರ್ಮ ವನ್ನು ಅವಲಂಬಿಸಿ ಧರ್ಮ, ಸಾಹಿತ್ಯ, ಸಂಸ್ಕೃತಿಗಳನ್ನು ಪರಿ ಪೋಷಿಸುತ್ತಿದ್ದನು. ಹಂಪೆಯ ನೂರೊಂದು ವಿರಕ್ತರೂ ಗೋಸಲಸಿದ್ಧೇಶ್ವರರ ಕರಕಮಲಸಂಜಾತರೆನಿಸಿದ್ದರು. ಶಂಕರ ದೇಶಿಕರು ಪ್ರೌಢದೇವರಾಯನಿಗೆ ಮತ್ತು ನೂರೊಂದುವಿರಕ್ತರಿಗೆ

ಷಟ್ಸ್ಥಲ ಜ್ಞಾನೋಪದೇಶ ಮಾಡಿದ್ದರು. ಈ ವಿರಕ್ತಗಣ ಸಿದ್ಧಲಿಂಗರ ತಪಃಪ್ರಭಾವವನ್ನು ಅರಿತು ಆಗಾಗ ಅವರಲ್ಲಿಗೆ ಬಂದು ತತ್ವಜ್ಞಾನವನ್ನು ಪಡೆಯುತ್ತಿದ್ದರು. ಅವರು ಸಂದರ್ಶಿಸಿದ ಪ್ರತಿಯೊಂದು ಕ್ಷೇತ್ರವೂ ಪಾವನವಾಯಿತು; ಅವರು ಮಿಂದ ಪ್ರತಿಯೊಂದು ತೀರ್ಥವೂ ಪವಿತ್ರವಾಯಿತು; ಅವರು ಮೆಟ್ಟಿದ ನೆಲವೆಲ್ಲ ಅವಿಮುಕ್ತ ಕ್ಷೇತ್ರವಾಯಿತು; ಅವರು ಅನುಷ್ಠಾನ ಮಾಡಿದ ಸ್ಥಳವೆಲ್ಲ ಕೈಲಾಸವಾಯಿತು ; ಅವರು ನುಡಿದ ನುಡಿ ಶಾಸ್ತ್ರವಾಯಿತು; ಅವರು ಮಾಡಿದ ಉಪದೇಶ ಶಿವಗೀತೆಯಾಯಿತು ! ಆದರೂ ಅವರು ಲೋಕವನ್ನು ಮರೆಯಲಿಲ್ಲ ; ಜನಜೀವನವನ್ನು ತ್ಯಜಿಸಲಿಲ್ಲ; ಮಾನವಧರ್ಮವನ್ನು ಬಿಡಲಿಲ್ಲ; ದೀನದಲಿತರನ್ನು ನಿರಾಕರಿಸಲಿಲ್ಲ. ಅವರು ಸರ್ವಪುರಾತನರನ್ನೂ ಗೌರವಿಸಿದರು ; ಪ್ರಮಥರನ್ನು ಸ್ಮರಿಸಿದರು ; ಶರಣರನ್ನು ನೆನೆದರು.

ಸಿದ್ಧಲಿಂಗರು ಕನ್ನಡನಾಡಿನಲ್ಲಿ ಸಂಚರಿಸುತ್ತ ಗುಮ್ಮಳಾಪುರದಲ್ಲಿ ವೀರಶೈವಧರ್ಮವನ್ನು ಉಪದೇಶಿಸಿದರು. ನಾನಾ ಜಾತಿ ಪಂಗಡಗಳ ಅನೇಕರು ಶಿವಭಕ್ತರಾದರು. ಅಲ್ಲಿಂದ ಅವರು ಶಿವಗಂಗೆಗೆ ಬಂದರು. ಅಲ್ಲಿ ಮೇಲಣ ಗವಿಮಠದಲ್ಲಿ ಕೆಲವು ಕಾಲ ಅನುಷ್ಠಾನ ಮಾಡಿದರು. ಸಿದ್ಧಲಿಂಗರ ಶಿಷ್ಯ ಶೀಲವಂತಾರ್ಯ ; ಆತನ ಶಿಷ್ಯ ಹಲಗೆಯಾರ್ಯ; ಅವನ ಶಿಷ್ಯ ಕೆಂಚವೀರಣಾರ್ಯ. ಹಲಗೆಯಾರ್ಯ 'ಶೂನ್ಯಸಂಪಾದನೆ' ಎಂಬ ವಚನಸಂಕಲನವನ್ನು ಇಲ್ಲಿ ರಚಿಸಿದರೆಂದು ಗೊತ್ತಾಗುತ್ತದೆ. ಅವರು ದೇಶಮಧ್ಯದಲ್ಲಿ ಸಂಚರಿಸುತ್ತ ಅನೇಕ ವಾಮಪಂಥಗಳ ಸಂಪ್ರದಾಯಗಳನ್ನೂ ಅನಾಚಾರಗಳನ್ನೂ ಮಾರ್ಪಡಿಸಿದರು. ನರಬಲಿ, ಪ್ರಾಣಿವಧೆ, ಮದ್ಯಪಾನ, ಮಾಂಸಭಕ್ಷಣೆ, ದುರಾಚಾರ, ದುಷ್ಟ

ಶಕ್ತಿಪೂಜೆ, ಪರಸ್ತ್ರೀಸಂಗ ಮೊದಲಾದ ನೀಚವೃತ್ತಿಗಳನ್ನು ಖಂಡಿಸಿ, ಭೂತದಯೆ, ಮಾನವಪ್ರೇಮ, ಸದಾಚಾರ, ಸನ್ಮಾರ್ಗ ಪ್ರವೃತ್ತಿ, ಈಶ್ವರ ಪೂಜೆ, ಪರನಾರೀ ಮಾತೃಭಾವ ಮೊದಲಾದ ಸದ್ಗುಣಗಳನ್ನು ಬೋಧಿಸಿ, ಅವರು ಸಮಾಜವನ್ನು ಉದ್ಧರಿಸಿದರು. ಕನ್ನಡನಾಡಿನಲ್ಲಿ ಕುಟಿಲಸಿದ್ಧರು ವಾಮಾಚಾರಗಳಲ್ಲಿ ನಿರತರಾಗಿದ್ದರು. ಅವರು ಭೈರವಾಕಾರದಿಂದ ತಿರುಗುತ್ತ "ಜಯ ಜಯ ಭೈರವಾ" "ಜಯ ವೃಶ್ಚಿಕಾರೂಢ" ಎಂದು ಕೂಗುತ್ತ ಜನರನ್ನು ದುರಾಚಾರಗಳಲ್ಲಿ ಪ್ರೇರೇಪಿಸುತ್ತಿದ್ದರು. ಉತ್ತುಂಗ ಜೋಗಿ ಎಂಬುವನು ಈ ಕುಟಿಲಸಿದ್ಧರ ಯಜಮಾನನಾಗಿದ್ದನು. ಸಿದ್ಧಲಿಂಗರು ಒಮ್ಮೆ ಈ ಉತ್ತುಂಗ ಜೋಗಿಯನ್ನು ತಮ್ಮ ಸಂಚಾರ ಕಾಲದಲ್ಲಿ ಸಂಧಿಸಿದರು. ಆ ಕುಟಿಲ ಸಿದ್ಧರು ಈ ಶಿವಸಿದ್ಧರನ್ನು ಕಂಡು ಪರಿಹಾಸಮಾಡುತ್ತ ದುರ್ಮಾರ್ಗದಿಂದ ವರ್ತಿಸಿದರು. ಆಗ ಸಿದ್ಧಲಿಂಗರು ಅವರನ್ನು ಕುರಿತು "ಆತ್ಮಸುಖ ದುರಾಚಾರಗಳಿಂದ ಸಿದ್ಧಿಸುವುದಿಲ್ಲ; ಈ ಶರೀರ ಶಾಶ್ವತವಲ್ಲ; ಆತ್ಮ ಮಾತ್ರ ಶಾಶ್ವತ; ಆತ್ಮಾನುಸಂಧಾನ ಯೋಗದಿಂದ ಈ ಜೀವ ಮುಕ್ತನಾಗುತ್ತಾನೆ. ಆತ್ಮಸಾಕ್ಷಾತ್ಕಾರವೇ ಮುಕ್ತಿ; ಇಂದ್ರಿಯನಿಗ್ರಹವೇ ಮುಕ್ತಿಯ ಸೋಪಾನ; ಶಿವಯೋಗದಿಂದ ಆತ್ಮಕಲ್ಯಾಣವಾಗುತ್ತದೆ; ಪರಮಾನಂದ ಪ್ರಾಪ್ತವಾಗುತ್ತದೆ" ಎಂದು ಉಪದೇಶ ಮಾಡಿದರು. ಉತ್ತುಂಗ ಜೋಗಿಗೆ ಜ್ಞಾನೋದಯವಾಯಿತು. ಅವನು ಸಿದ್ಧಲಿಂಗರ ಶಿಷ್ಯನಾದನು. ಆ ಸುಡುಗಾಡುಸಿದ್ಧರೆಲ್ಲ ಶಿವಭಕ್ತರಾದರು. ಸಮಾಜದಲ್ಲಿ ಧರ್ಮಪ್ರಭೆ ಬೆಳಗಿತು.

ಸಿದ್ಧಲಿಂಗರು ಯಾವ ರಾಜನ ಆಶ್ರಯದಲ್ಲಿಯೂ ಇರಲಿಲ್ಲ. ಅವರು ಪರಮವೈರಾಗ್ಯಮೂರ್ತಿ. ತಾಯಿ ಹಸು ಹಸಿದ ಕರು

ವನ್ನು ಅರಸಿಕೊಂಡು ಹೋಗುವಂತೆ ಅವರು ದುಃಖಭಾಜನರನ್ನು ಅರಸಿಕೊಂಡು ಸಂಚರಿಸಿದರು. ಅವರು ತಮ್ಮ ಅಮೃತವಾಣಿಯಿಂದ ದುಃಖಿಗಳನ್ನು ಸಂತೈಸಿದರು. ಗೃಹಸ್ಥರನ್ನು ಹರಸಿದರು; ಆರ್ತರನ್ನು ಉದ್ಧರಿಸಿದರು. ಮರಗಳಲ್ಲಿ ಹಣ್ಣು, ಲತೆಗಳಲ್ಲಿ ಹೂ ಬಿಡುವುದು ಪರೋಪಕಾರಕ್ಕಾಗಿಯೇ. ಮರವೇ ಹಣ್ಣನ್ನು ತಿನ್ನುವುದಿಲ್ಲ; ಲತೆಯೇ ಹೂವನ್ನು ಮುಡಿಯುವುದಿಲ್ಲ. ಅವು ಅವ್ಯಾಜ ಪ್ರೇಮದಿಂದ ಲೋಕಸೇವೆಯನ್ನು ಮಾಡುತ್ತವೆ. ಹಾಗೆಯೇ ಮಹಾಪುರುಷರು ಈಶ್ವರಾರ್ಪಣ ಬುದ್ಧಿಯಿಂದ ತಮ್ಮ ಜೀವನವನ್ನು ಸವೆಸುತ್ತಾರೆ. ಸಿದ್ಧಲಿಂಗರ ತಪಃಪ್ರಭಾವ ನಿತ್ಯ ಜನಜೀವನದಲ್ಲಿ ಪ್ರತಿಬಿಂಬಿಸಿತು. ಅವರನ್ನು ಲೋಕ ಸಾಕ್ಷಾತ್ ಶಿವನೆಂದೇ ನಂಬಿತು; ಆರಾಧಿಸಿತು. ಒಮ್ಮೆ ಕುಂತಳನಾಡಿನ ಕುರುಡ ಜಂಗಮನೊಬ್ಬನು ಸಿದ್ಧಲಿಂಗರಿಂದ ಕಣ್ಣುಗಳನ್ನು ಪಡೆಯಲು ಬಂದನು. ಅವನನ್ನು ಈ ಯತಿವರ್ಯರು ಅನುಗ್ರಹಿಸಿದರು. "ಅಯ್ಯಾ! ನೀನು ಈ ಸುಂದರ ಜಗತ್ತನ್ನು ನೋಡಲಾರೆ; ಇಷ್ಟಲಿಂಗವನ್ನು ಕಣ್ಣಾರೆ ಕಾಣಲಾರೆ; ನಿನ್ನ ಬಾಹ್ಯಚಕ್ಷು ನಿರರ್ಥಕವಾಯಿತು; ಪಾಪಿಷ್ಠರು ಕಣ್ಣಿದ್ದರೂ ಕುರುಡರೇ ಆಗಿರುತ್ತಾರೆ; ನೀನು ಪರಮಾತ್ಮನಲ್ಲಿ ನಂಬಿಕೆ ಇಡು; ಜಂಗಮತತ್ತ್ವ ನಿನಗೆ ಲಭಿಸಲಿಲ್ಲ; ಸರ್ವಸಂಗಪರಿತ್ಯಾಗವೇ ಜಂಗಮಲಕ್ಷಣ; ಶಿವಭಕ್ತಿಯೇ ಜಂಗಮದೃಷ್ಟಿ" ಎಂದು ಬೋಧಿಸಿ ಅವರು ಕುರುಡನಿಗೆ ಜ್ಞಾನದ ದೃಷ್ಟಿಯನ್ನು ನೀಡಿದರು. ಇದನ್ನು ಕವಿ ಪವಾಡದಂತೆ ಹಾಡಿ ತಣಿದಿದ್ದಾನೆ.

ಸಿದ್ಧಲಿಂಗರು ಅಲ್ಲಲ್ಲಿ ಸಂಚರಿಸುತ್ತ ಸಿದ್ಧಗಂಗೆಗೆ ಬಂದರು. ಅಲ್ಲಿ ಅವರು ಕೆಲವು ಕಾಲ ಶಿವಯೋಗನಿರತರಾಗಿದ್ದರು. ಆಗ ತಮಿಳು ನಾಡಿನಿಂದ ಬಂದ ರೋಗಿಯೊಬ್ಬನನ್ನು ಅವರು ಶಿವ

ಪ್ರಸಾದ ಬಲದಿಂದ ಗುಣಪಡಿಸಿದರು. ಅವರು ಸಿದ್ಧಲಿಂಗರನ್ನು ತಮಿಳು ಭಾಷೆಯಲ್ಲಿ ಸ್ತೋತ್ರ ಮಾಡಿ ಕೊಂಡಾಡಿದನು. ಅವನಿಗೆ ಕನ್ನಡ ಬರುತ್ತಿರಲಿಲ್ಲ. ಆಗ ಸಿದ್ಧಲಿಂಗರು ಅವನಿಗೆ ಕೆಲವು ದಿನಗಳಲ್ಲಿಯೇ ಕನ್ನಡವನ್ನು ಕಲಿಸಿ ಅವನಿಂದ ಕನ್ನಡದಲ್ಲಿಯೇ ಸ್ತೋತ್ರಗಳನ್ನು ಹಾಡಿಸಿದರು. ಈ ತಮಿಳು ಭಕ್ತನೇ ವೀರ ಣಾರ್ಯ; ಅವನು ಶಿವಭಕ್ತನಾದನು. ಸಿದ್ಧಲಿಂಗರ ವೈರಾಗ್ಯ ಭಾವ ಅತ್ಯುತ್ಕಟವಾಯಿತು : ಅವರ ಶಿವಯೋಗ ಪರಮೋನ್ನತ ವಾಯಿತು. ಸಿದ್ಧಗಂಗೆ ಅವರ ತಪೋಭೂಮಿಯಾಯಿತು.

೫

ಸಿದ್ಧಗಂಗೆಯಿಂದ ಹೊರಟು ಸಿದ್ಧಲಿಂಗರು ಅಲ್ಲಲ್ಲಿ ಸಂಚರಿಸು ತ್ತಿದ್ದಾಗ ; ನಂಬಿಯಣ್ಣನೆಂಬ ಭಕ್ತನ ಬಿನ್ನಹವನ್ನು ಅಂಗೀಕರಿಸಿ ಕಗ್ಗೆರೆ ಎಂಬ ಗ್ರಾಮಕ್ಕೆ ಬಂದರು. ಆ ಊರು ನಾಗಿಣಿ ನದಿಯ ತೀರದಲ್ಲಿದೆ. ಅವರು ಆ ಗ್ರಾಮದ ಬಳಿಯ ತೋಟದಲ್ಲಿ ತಂಗಿ ದರು. ಅಲ್ಲಿ ಪ್ರಶಾಂತ ವಾತಾವರಣ ಆನಂದದಾಯಕವಾಗಿತ್ತು. ಅಲ್ಲಿಯೇ ಶಿವಪೂಜಾನಿಷ್ಠರಾಗಿ ತಪೋಮಗ್ನರಾದರು. ಇನ್ನು ಮೂರು ದಿನಗಳಲ್ಲಿ ಅವರು ಆ ಭಕ್ತನ ಮನೆಯಲ್ಲಿ ಶಿವಪೂಜೆ ಮಾಡಬೇಕಾಗಿತ್ತು. ಅಷ್ಟರಲ್ಲಿಯೇ ಬೇಡರ ದಂಡು ಆ ಊರನ್ನು ಕೊಳ್ಳೆ ಹೊಡೆಯಿತು. ಜನರು ಸಾವು ನೋವುಗಳಿಂದ ಪರಿತಪಿ ಸುತ್ತ, ಊರು ಬಿಟ್ಟು ಹೋದರು. ಸಿದ್ಧಲಿಂಗರು ಆ ತೋಟ ದಲ್ಲಿಯೇ ಶಿವಯೋಗನಿರತರಾದರು. ಅವರ ಸುತ್ತಲೂ ಹುತ್ತ ಬೆಳೆಯಿತು. ಒಂದು ಗೋವು ಪ್ರತಿದಿನವೂ ಆ ಹುತ್ತದ ಮೇಲೆ ನಿಂತು ಆ ಹುತ್ತದ ಬಿಲಕ್ಕೆ ತಾನಾಗಿಯೇ ಹಾಲು ಸೂಸುತ್ತಿತ್ತು. ಹನ್ನೆರಡು ವರ್ಷ ಕಳೆಯಿತು. ಆ ಹುತ್ತದಿಂದ ಓಂಕಾರ ಧ್ವನಿ

ಮೊಳಗುತ್ತಿತ್ತು. ಆಗ ಶಿವಭಕ್ತರು ಆ ಹುತ್ತವನ್ನು ಎಚ್ಚರಿಕೆ ಯಿಂದ ಬಿಡಿಸಿದರು. ಆಗ ದಿವ್ಯ ತೇಜೋಮೂರ್ತಿ ಸಿದ್ಧಲಿಂಗ ಯತಿವರ್ಯರು ಗೋಚರಿಸಿದರು. ಅಂದಿನಿಂದ ಅವರಿಗೆ ತೋಂಟ ದಾರ್ಯರೆಂದು ಹೆಸರಾಯಿತು. ಅವರನ್ನು ತೋಂಟದ ಸಿದ್ಧ ಲಿಂಗರೆಂದೂ ಕರೆಯುತ್ತಾರೆ.

ದಯೆಯೇ ಧರ್ಮದ ಮೂಲ ಎಂದು ಬಸವಣ್ಣನವರು ಅಂದಿಗೆ ಮುನ್ನೂರು ವರ್ಷಗಳ ಹಿಂದೆಯೇ ಬೋಧಿಸಿದ್ದರು. ಸಿದ್ಧ ಲಿಂಗರೂ "ಅಹಿಂಸಾ ಪರಮೋಧರ್ಮಃ" ಎಂಬ ಸನಾತನ ತತ್ತ್ವವನ್ನು ಸಮಾಜದಲ್ಲಿ ಆಚರಣೆಗೆ ತಂದರು. ಹದಿನೈದನೆಯ ಶತಮಾನದಲ್ಲಿ ಕೆಲವು ಪಂಗಡಗಳ ಜನರು ಮಾರಿ ಮಸಣಿ ದುರ್ಗಿ ಚಂಡಿ ಚಾಮುಂಡಿ ಮೊದಲಾದ ಕ್ಷುದ್ರದೇವತೆಗಳನ್ನು ಪೂಜಿಸು ತ್ತಿದ್ದರು. ಅಲ್ಲದೆ, ಆ ದೇವತೆಗಳಿಗೆ ಅವರು ಕೋಳಿ, ಕುರಿ, ಮೇಕೆ, ಕೋಣಗಳನ್ನು ಬಲಿಗೊಟ್ಟು, ಮದ್ಯಪಾನ ಮಾಡಿ, ಭೀಕರರೂಪದಿಂದ ಕುಣಿಯುತ್ತಿದ್ದರು. ಆ ಪ್ರಾಂತದ ಹೊಳಲು ಗುಂಡ ಗ್ರಾಮದ ಮಾರಿಕಾಂಬೆ ಜಾತ್ರೆಯಲ್ಲಿ ಜನರು ಪ್ರತಿ ವರ್ಷವೂ ನೂರಾರು ಮೂಕ ಪ್ರಾಣಿಗಳನ್ನು ದೇವಿಗೆ ಬಲಿಗೊಟ್ಟು ಪಾಪಭಾಜನರಾಗುತ್ತಿದ್ದರು. ಸಿದ್ಧಲಿಂಗರು ಮಾರ್ಗವಶದಿಂದ ಹೊಳಲುಗುಂಡದ ಮಾರಿಕಾಂಬೆಯ ದೇವಾಲಯದ ಬಳಿಗೆ ಬಂದರು. ಅಂದು ಮಾರಿಯ ಜಾತ್ರೆ; ಅದುವರೆಗಾಗಲೇ ಅನೇಕ ಪ್ರಾಣಿಗಳನ್ನು ಕೊಂದು ಜನರು ಕುಣಿಯುತ್ತಿದ್ದರು. ಅಲ್ಲೆಲ್ಲಾ ರಕ್ತಹೆಪ್ಪುಗಟ್ಟಿತ್ತು. ಅದನ್ನು ಕಂಡು ಆ ಶಿವಯೋಗಿ ಮರುಗಿದರು. ಅವರು ಆ ಜನಸಂದಣಿಯಲ್ಲಿ ನುಗ್ಗಿ ದಾರಿ ಬಿಡಿಸಿ ಕೊಂಡು ದೇವಿಯ ಮಂದಿರದ ಮುಂದುಗಡೆ ಬಂದು ನಿಂತರು. ಆ ಶಿವಯೋಗಿಯನ್ನು ಕಂಡು ಎಲ್ಲರೂ ಬೆರಗಾದರು! ಎಲ್ಲ

ವಾದ್ಯಧ್ವನಿ ನಿಂತಿತು! ಆಗ ಸಿದ್ಧಲಿಂಗರು—"ಅಯ್ಯಾ! ಈ ದೇವಿ ನಮ್ಮೆಲ್ಲರ ತಾಯಿ; ತಾಯಿಗೆ ಮಕ್ಕಳ ಮೇಲೆ ಅಪಾರ ಪ್ರೇಮ; ಎಲ್ಲ ಪ್ರಾಣಿಕೋಟಿಯೂ ಅವಳ ಸಂತಾನವೇ. ಯಾವ ತಾಯಿಯೂ ತನ್ನ ಮಕ್ಕಳನ್ನು ಕೊಂದು ಅವರ ರಕ್ತ ಮಾಂಸಗಳನ್ನು ಸವಿಯಲಾರಳು; ಒಂದು ಪ್ರಾಣಿಯನ್ನು ಕೊಂದರೆ ನಾವು ಪುನಃ ಅದನ್ನು ಬದುಕಿಸಲಾರೆವು; ಅದನ್ನು ಕೊಲ್ಲಲು ನಮಗೇನು ಅಧಿಕಾರವಿದೆ? ನಮ್ಮ ಮಕ್ಕಳನ್ನು ಯಾರಾದರೂ ಕೊಂದರೆ ನಮಗೆ ದುಃಖವಾಗುವುದಿಲ್ಲವೇ? ಪ್ರಾಣಿ ಹಿಂಸೆಯಿಂದ ಪಾಪಸಂಘಟನೆಯಾಗುತ್ತದೆ; ಆ ಪಾಪದಿಂದ ನರಕಪ್ರಾಪ್ತಿಯಾಗುತ್ತದೆ; ದೇವಿಯನ್ನು ಸಾತ್ವಿಕ ರೀತಿಯಿಂದ ಆರಾಧಿಸಬೇಕು; ಇದನ್ನು ನೀವು ಒಪ್ಪುವವರೆಗೂ ನಾನು ಇಲ್ಲಿಂದ ಕದಲುವುದಿಲ್ಲ" ಎಂದು ಹೇಳಿ, ನಿಂತನಿಲುವಿನಲ್ಲಿಯೇ ಯೋಗಸಮಾಧಿಯಲ್ಲಿ ಮೈಮರೆತರು. ಮೂರು ದಿನಗಳಾಯಿತು! ಆ ಶಿವಯೋಗಿಯ ತೇಜಸ್ಸಿನಿಂದ ಆ ಮಾರಿ ಭಕ್ತರ ಮನಸ್ಸು ಪರಿವರ್ತನೆಯಾಯಿತು. ಅವರು ಪ್ರಾಣಿಹಿಂಸೆಯನ್ನು ತ್ಯಜಿಸಲು ಒಪ್ಪಿದರು. ಮಾರಿಕಾಂಬೆ ಅಂದಿನಿಂದ ಸಾತ್ವಿಕ ತೇಜೋಮೂರ್ತಿಯಾದಳು! ಆಕೆಯ ಭಕ್ತರೆಲ್ಲರೂ ಶಿವಭಕ್ತರಾದರು. ಅಲ್ಲಿಂದ ಅವರು ಗೂಳೂರು, ತುಮಕೂರು ಮೊದಲಾದ ಸ್ಥಳಗಳಲ್ಲಿ ಭಕ್ತರನ್ನು ಅನುಗ್ರಹಿಸಿ ಧರ್ಮೋಪದೇಶ ಮಾಡಿದರು.

೬

ಸಿದ್ಧಲಿಂಗರ ಕಾಲದಲ್ಲಿ ವಿರೂಪಾಕ್ಷರಾಯನು ವಿಜಯನಗರದಲ್ಲಿ ಆಳುತ್ತಿದ್ದನು. ಅವನು ಸಿದ್ಧಲಿಂಗರ ಆಧ್ಯಾತ್ಮಿಕ ವೈಭವವನ್ನು

ಆರಿತಿದ್ದನು. ಆಗ ಸಿದ್ಧಲಿಂಗರಿಗೆ ಸುಮಾರು ಅರವತ್ತು ವರ್ಷ ವಯಸ್ಸಾಗಿತ್ತು. ಅವರು ದೇಶಮಧ್ಯದಲ್ಲಿ ಸಂಚರಿಸುತ್ತ ಪ್ರಾಚೀನ ಧರ್ಮಕ್ಷೇತ್ರವೆನಿಸಿದ್ದ ಹಂಪೆಯನ್ನು ಸಂದರ್ಶಿಸಿದರು. ಅವರ ಪಂಪಾಪ್ರವಾಸ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಅದ್ವಿತೀಯ ಸಾಹಿತ್ಯ ದಿಗ್ವಿಜಯವೆಂದು ಹೇಳಬಹುದು. ಅವರು ಸುಮಾರು ೩೦ ವರ್ಷ ನಾಡಿನಲ್ಲಿ ಧರ್ಮಪ್ರಚಾರ ಮಾಡಿದರು. ಆ ಶತಮಾನದಲ್ಲಿ ಅದುವರೆಗೆ ವಿಜಯನಗರದ ಸಾರ್ವಭೌಮರ ಆಶ್ರಯದಲ್ಲಿ ಅನೇಕ ಕವಿಗಳು ಕಾವ್ಯರಚನೆ ಮಾಡಿದ್ದರು. ಅವರಲ್ಲಿ ಅನೇಕ ಕವಿಗಳು ವಯಸ್ಸಿನಲ್ಲಿ ಹಿರಿಯರಾದವರೂ ಸಿದ್ಧಲಿಂಗರ ಸಮಕಾಲೀನರಾಗಿದ್ದರು. ಮಹಾಲಿಂಗದೇವ, ಲಕ್ಕಣದಂಡೇಶ, ಜಕ್ಕಣಾರ್ಯ, ಚಾಮರಸ, ಕಲ್ಲುಮಠದ ಪ್ರಭುದೇವ, ಮಗ್ಗೆಯ ಮಾಯಿದೇವ, ಗುರುಬಸವ, ಬತ್ತಲೇಶ್ವರ, ಚಂದ್ರಕವಿ, ಬೊಮ್ಮರಸ, ಚತುರಾರ್ಯ ಬೊಮ್ಮರಸ, ಕಲ್ಲರಸ ಮೊದಲಾದವರು ಹಂಪೆಯ ವಲಯದಲ್ಲಿ ಪ್ರಮುಖ ಪಂಡಿತರಾಗಿದ್ದರು. ಸಿದ್ಧಲಿಂಗರು ಹಂಪೆಗೆ ಹೋದಾಗ ಅವರಲ್ಲಿ ಕೆಲವರಾದರೂ ಅವರನ್ನು ನೋಡಿರಬೇಕು. ಆ ವೇಳೆಗಾಗಲೇ ಹಂಪೆಯ ವಿರಕ್ತರು ವೀರಶೈವ ಧರ್ಮಜ್ಯೋತಿಗಳಾಗಿ ಬೆಳಗುತ್ತಿದ್ದರು. ಸಿದ್ಧಲಿಂಗರು ಈ ವಿರಕ್ತ ಪಂಥವನ್ನು ಪರಿಪೋಷಿಸಿದರು; ಅನುಗ್ರಹಿಸಿದರು. ಆದರೆ ಸಿದ್ಧಲಿಂಗರು ನೂರೊಂದು ವಿರಕ್ತರಲ್ಲಿ ಪರಿಗಣಿತರಾಗಿಲ್ಲ. ಅವರ ಬಳಿಯಲ್ಲಿ ೭೦೧ ವಿರತರಿದ್ದರು. ಆ ವಿರತರಲ್ಲಿ ಸಿದ್ಧಲಿಂಗರೇ ಮೊದಲನೆಯವರು. ಅವರು ಬರೆದಿರುವ ''ಷಟ್‌ಸ್ಥಲ ಜ್ಞಾನಸಾರಾಮೃತ''ದಲ್ಲಿ ೭೦೧ ವಚನಗಳನ್ನು ಮಾತ್ರ ಬರೆದಿರುತ್ತಾರೆ. ಇದು ೭೦೧ ವಿರತರು ಎಂಬುದರ ಸಂಕೇತವಾಗಿದೆ. ಆಗ ''ವಿರಕ್ತ ಪಂಥವೊಂದು ವಿಜಯ

ನಗರದಲ್ಲಿ ವೀರಶೈವಧರ್ಮ ಪ್ರಚಾರದಲ್ಲಿ ನಿರತವಾಗಿತ್ತು. ಆದರ ಸ್ಥಾನಮಾನ ಸಮಾಜದಲ್ಲಿ ಖಚಿತವಾಗಿ ನಿರ್ಧಾರವಾಗಿರಲಿಲ್ಲ." ಅಂಥ ಪರಿಸ್ಥಿತಿಯಲ್ಲಿ ಸಿದ್ಧಲಿಂಗರು ಹಂಪೆಗೆ ಬಂದುದರಿಂದ ವಿರಕ್ತ ಪಂಥ ನವಚೈತನ್ಯವನ್ನು ಪಡೆಯಿತು. ಅವರ ತಪಃ ಪ್ರಭಾವ, ಪ್ರಖರವೈರಾಗ್ಯ, ಶಿವಾನುಭವಸಿದ್ಧಿ, ಲಿಂಗಾಂಗ ಸಾಮರಸ್ಯ ದರ್ಶನ, ಷಟ್‌ಸ್ಥಲ ಜ್ಞಾನ-ಇವು ವಿರಕ್ತ ಪಂಥದ ಅಂತಶ್ಶಕ್ತಿಯನ್ನು ರೂಪಿಸಿದುವು. ಪ್ರೌಢದೇವರಾಯನ ಕಾಲ ದಲ್ಲಿ ತುಂಬ ಹೀನಸ್ಥಿತಿಯಲ್ಲಿದ್ದ ವಿರಕ್ತಗಣ ತೋಂಟದ ಸಿದ್ಧ ಲಿಂಗಯತಿವರ್ಯರ ಅನುಗ್ರಹದಿಂದ ಮತ್ತೆ ಪ್ರಜ್ವಲಿಸಿತು. ಸಿದ್ಧ ಲಿಂಗರನ್ನು ದ್ವಿತೀಯ ಅಲ್ಲಮಪ್ರಭುವೆಂದು ವಿರಕ್ತಗಣ ಗೌರವಿ ಸಿತು. ಏಳ್ನೂರೊಂದು ವಿರತರೇ ಬೇರೆ, ನೂರೊಂದು ವಿರಕ್ತರೇ ಬೇರೆ. ವಿರತರಿಗೂ ವಿರಕ್ತರಿಗೂ ಧರ್ಮ ಸಂಬಂಧವೇ ಹೊರತು ಸಂಘ ಸಂಬಂಧವಿಲ್ಲ. ವಿರಕ್ತರ ತರುವಾಯ ನಿರಂಜನ ಗಣೇಶನೆಂಬ ಪ್ರಥಮವರ್ಯ ಏಳುನೂರು ಗಣೇಶ್ವರರೊಂದಿಗೆ ಜಂಗಮಸ್ಥಲದಲ್ಲಿ ನಿಂತು ಷಟ್‌ಸ್ಥಲವನ್ನು ಉದ್ಧರಿಸಲು ಸಿದ್ಧಲಿಂಗರು ಅವತರಿಸಿದರೆಂದು ಚನ್ನಬಸವ ಪುರಾಣದಲ್ಲಿ ಉಕ್ತ ವಾಗಿದೆ. ಕವಿಚರಿತೆಕಾರರೂ ಇದೇ ಅಭಿಪ್ರಾಯವನ್ನು ಸೂಚಿ ಸಿರುತ್ತಾರೆ. ಇವರೆಲ್ಲರೂ ಪ್ರೌಢದೇವರಾಯನ ಕಾಲಾನಂತರ ವಿರೂಪಾಕ್ಷರಾಯನ (ಕ್ರಿ.ಶ. ೧೪೬೦-೧೪೭೮) ಆಳ್ವಿಕೆಯಲ್ಲಿದ್ದ ರೆಂದು ವಿರೂಪಾಕ್ಷ ಪಂಡಿತ ಹೇಳಿದ್ದಾನೆ.

ಸಿದ್ಧಲಿಂಗರು ವಿರೂಪಾಕ್ಷರಾಯನನ್ನು ಹರಸಿ, ವೀರಶೈವ ಧರ್ಮವನ್ನು ಬೋಧಿಸಿದರು. ಕಲ್ಯಾಣದ ಶಿವಶರಣರು ಸೃಷ್ಟಿಸಿದ ವಚನಸಾಹಿತ್ಯವನ್ನು ಸಂಪಾದಿಸಿ ಪರಿಷ್ಕರಿಸಿ ಉಳಿಸಬೇಕೆಂದು ಅವರು ವೀರಶೈವ ತತ್ತ್ವನಿಷ್ಠರನ್ನು ಪ್ರೋತ್ಸಾಹಿಸಿದರು. ಅವರ

ಉಪದೇಶ ಸಿದ್ಧಿಸಿತು. ಶಿವಗಣಪ್ರಸಾದಿ ಮಹಾದೇವಯ್ಯನ 'ಶೂನ್ಯಸಂಪಾದನೆ' ಉದಯವಾಯಿತು. ಇದರಂತೆಯೇ ಕಾಲಕ್ರಮದಲ್ಲಿ ಹಲಗೆದೇವರ 'ಶೂನ್ಯಸಂಪಾದನೆ' ಗೂಳೂರು ಸಿದ್ಧವೀರರ 'ಶೂನ್ಯಸಂಪಾದನೆ' ಮತ್ತು ಗುಮ್ಮಳಾಪುರದ ಸಿದ್ಧಲಿಂಗರ 'ಶೂನ್ಯಸಂಪಾದನೆ' ಎಂಬ ಸಂಕಲನ ಗ್ರಂಥಗಳು ರಚಿತವಾದುವು. ಕನ್ನಡ ಸಾಹಿತ್ಯದಲ್ಲಿ 'ಶೂನ್ಯಸಂಪಾದನೆ'ಯ ನಿರೂಪಣೆ ವೈಶಿಷ್ಟ್ಯಪೂರ್ಣವಾಗಿದೆ. ಇದನ್ನು ರಚಿಸಿದವರಲ್ಲಿ ಗೂಳೂರು ಸಿದ್ಧವೀರರೂ, ಗುಮ್ಮಳಾಪುರದ ಸಿದ್ಧಲಿಂಗರೂ ತೋಂಟದ ಸಿದ್ಧಲಿಂಗರ ಸಾಕ್ಷಾತ್ ಶಿಷ್ಯರು : ಉಳಿದ ಇಬ್ಬರೂ ಅವರ ಶಿಷ್ಯಪರಂಪರೆಯವರಾಗಿದ್ದಾರೆ. ಸಿದ್ಧಲಿಂಗರು ಹಂಪೆಯಿಂದ ಹೊರಟು ಅನೇಕ ಸ್ಥಳಗಳಲ್ಲಿ ಭಕ್ತರಿಗೆ ಉಪದೇಶ ಮಾಡುತ್ತ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನಲ್ಲಿ ಹರಿಯುವ ನಾಗಿಣೀ ನದಿಯ ತೀರದಲ್ಲಿರುವ ಎಡೆಯೂರು ಬಳಿಗೆ ಬಂದರು. ಇಲ್ಲಿಗೆ ಸಮೀಪದಲ್ಲಿಯೇ ಉತ್ತರ ಭಾಗದಲ್ಲಿ ಕದಂಬ ನದಿ ಪ್ರವಹಿಸುತ್ತಿದೆ. ನಾಗಿಣೀ ಮತ್ತು ಕದಂಬ ನದಿಗಳ ಮಧ್ಯಪ್ರದೇಶದಲ್ಲಿ ಎಡೆಯೂರು ಇದೆ. ಇಲ್ಲಿ ಪ್ರಾಚೀನ ರೇಣುಕ ಶಾಖಾ ಮಠ ಮತ್ತು ವೀರಭದ್ರಸ್ವಾಮಿಯ ದೇವಾಲಯಗಳಿವೆ. ಸಿದ್ಧಲಿಂಗರು ಈ ಮಠದ ಸಮೀಪದಲ್ಲಿಯೇ ಶಿವಯೋಗ ನಿರತರಾದರು. ಇಲ್ಲಿ ಪ್ರಕೃತಿಸೌಂದರ್ಯ ಮನೋಹರವಾಗಿದೆ. ಹತ್ತಿರದಲ್ಲಿಯೇ ಆದಿಚುಂಚನಗಿರಿ ಗಂಭೀರವಾಗಿ ನಿಂತಿದೆ. ಅವರು ತಮ್ಮ "ಷಟ್‌ಸ್ಥಲಜ್ಞಾನಸಾರಾಮೃತ"ವನ್ನು ಎಡೆಯೂರಿನಲ್ಲಿ ಬರೆದಿರಬಹುದು. ಇದನ್ನು "ಸಿದ್ಧೇಶ್ವರ ವಚನಗಳು" ಎಂದೂ ಕರೆಯುತ್ತಾರೆ. ಇದರಲ್ಲಿ ೭೦೧ ವಚನಗಳಿವೆ. "ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ" ಎಂಬ ಅಂಕಿತ

ದಲ್ಲಿ ಅವರು ತಮ್ಮ ವಚನಗಳನ್ನು ರಚಿಸಿರುತ್ತಾರೆ. ತೋಂಟದ ಸಿದ್ಧಲಿಂಗರ ಸಿದ್ಧಪೀಠಾಧೀಶ್ವರರನ್ನು 'ಷಟ್‌ಸ್ಥಲ ಸಾರ್ವಭೌಮ' 'ಷಟ್‌ಸ್ಥಲ ಚಕ್ರವರ್ತಿ' 'ಜಗದ್ಗುರು' ಎಂದು ವಾಙ್ಮಯದಲ್ಲಿ ಸಂಬೋಧಿಸಿರುತ್ತಾರೆ. ಅವರು ಎಡೆಯೂರಿನಲ್ಲಿ ನೆಲಸಿದ ಮೇಲೆ ನಾಡಿನ ಎಲ್ಲ ಕಡೆಗಳಿಂದಲೂ ವಿರತರೂ, ವಿರಕ್ತರೂ, ಜಂಗಮರೂ, ಭಕ್ತರೂ, ಶ್ರೀಮಂತರೂ, ರಾಜರೂ, ವಿದ್ಯಾಪರಿಣತರೂ ಅವರ ಸನ್ನಿಧಿಗೆ ಬರುತ್ತಿದ್ದರು. ಅಲ್ಲಿ ಶ್ರೀ ಗುರುಸನ್ನಿಧಿಯಲ್ಲಿ ನಡೆಯುತ್ತಿದ್ದ ಶಿವಾನುಭವಸಂಗೋಷ್ಠಿಯಲ್ಲಿ ಎಲ್ಲರೂ ಅವರ ಉಪದೇಶಾಮೃತದಿಂದ ಕೃತಾರ್ಥರಾಗುತ್ತಿದ್ದರು. ಅವರು ೭೦೦ ಜನ ವಿರತರಿಗೂ ೩೦೦ ಜನ ಜಂಗಮರಿಗೂ ದೀಕ್ಷಾಗುರು. ನಾಡಿನಲ್ಲಿ ನೂರಾರು ವಿರಕ್ತ ಮಠಗಳೂ ಗುರುಮಠಗಳೂ ಏರ್ಪಟ್ಟವು. ಗುರುವಿರಕ್ತರು ಸಮಾಜದ ನೇತ್ರದ್ವಯ; ಇಬ್ಬರೂ ಸಮಾಜದಲ್ಲಿ ಸಂಪೂಜ್ಯರು. ಅವರು ಗುರುಮಠಗಳಲ್ಲಿ ಸುವ್ಯವಸ್ಥೆಯನ್ನು ಮಾಡಿದಂತೆಯೇ ವಿರಕ್ತ ಮಠಗಳಲ್ಲಿಯೂ ಕಟ್ಟುಕಟ್ಟಳೆಗಳನ್ನು ಏರ್ಪಡಿಸಿದರು. ವಿರಕ್ತಾಶ್ರಮ ಸ್ವೀಕಾರ ಸಮಯದಲ್ಲಿ "ಗೊಹೇಶ್ವರನ ವಚನ ; ಕರಣಹಸಿಗೆ ; ಮಿಶ್ರಾರ್ಪಣ ; ಸಿದ್ಧರಾಮೇಶ್ವರ ಮಂತ್ರಗೋಪ್ಯ ; ಅಕ್ಕಗಳ ಸೃಷ್ಟಿಯ ವಚನ ; ಪ್ರಭುದೇವರ ಸೃಷ್ಟಿಯ ವಚನ ; ಸಿದ್ಧೇಶ್ವರ ವಚನ; ಹಿರಿಯ ಮಂತ್ರಗೋಪ್ಯ; ಶೂನ್ಯಸಂಪಾದನೆ' ಮುಂತಾದ ಶಾಸ್ತ್ರಗಳ ಕಟ್ಟನ್ನು ವಿರಕ್ತ ವಟು ತನ್ನ ವಿರಕ್ತ ಗುರುವಿನಿಂದ ಸ್ವೀಕರಿಸಬೇಕು ಎಂಬ ನಿಯಮವನ್ನು ಮಾಡಿ ವಿರಕ್ತಸಂಪ್ರದಾಯದ ಪರಮಪೂಜ್ಯರಾದರು, ಸಿದ್ಧಲಿಂಗರ ಪ್ರಭಾವದಿಂದ ವಿರಕ್ತರಲ್ಲಿ ಮುರಿಗೀ ಸಮಯ, ಕುಮಾರ ಸಮಯ ಚೀಲಾಳ ಸಮಯ, ಸಂಪಾದನೆಯ ಸಮಯ, ಕೆಂಪಿನ ಸಮಯ ಎಂಬ

ಪಂಚಸಮಯ ಮಠಗಳಾದುವು. ಈ ಎಲ್ಲ ವಿರಕ್ತ ಮಠಗಳೂ ಧರ್ಮಕೇಂದ್ರಗಳಾಗಿವೆ. ಇವು ಪ್ರತಿಯೊಂದೂ ಸ್ವತಂತ್ರ ವಾಗಿವೆ. ಯಾವ ವಿರಕ್ತ ಮಠವೂ ಇನ್ನೊಂದು ವಿರಕ್ತಮಠಕ್ಕೆ ಅಧೀನ ಮಠವಾಗಿಲ್ಲ. ಇವು ಸಾಹಿತ್ಯ, ಸಂಸ್ಕೃತಿ, ಧರ್ಮ, ತತ್ತ್ವಜ್ಞಾನ ಮತ್ತು ಸನ್ಮಾರ್ಗಗಳನ್ನು ಸಮಾಜದಲ್ಲಿ ಪ್ರಸಾರ ಮಾಡುತ್ತಿವೆ. ಸಿದ್ಧಲಿಂಗರ ಧರ್ಮಜ್ಯೋತಿ ಅಖಂಡ ಕರ್ನಾಟಕ ದಲ್ಲಿ ಬೆಳಗಿತು.

ಸಿದ್ಧಲಿಂಗರ ಶಿಷ್ಯರಲ್ಲಿ ಚಿಟ್ಟಿಗದೇವ ಎಂಬ ವಿರತ ಎಂಟು ಜಡೆಯ ಗೋತ್ರದ ಪಟ್ಟದ ಮಠದ ಗುರುವಾಗಿದ್ದನು. ಸಿದ್ಧ ಲಿಂಗರು ತಮ್ಮ ಸನ್ನಿಧಿಯ ೭೦೦ ವಿರತ ಹೆಸರಿನ ೭೦೦ ಗೋತ್ರ ಗಳನ್ನು ಅಥವಾ ಬುಡಕಟ್ಟುಗಳನ್ನು ಏರ್ಪಡಿಸಿದರು. ಚಿಟ್ಟಿಗ ದೇವ ಚನ್ನರಾಯದುರ್ಗದ ಚನ್ನವೀರಪ್ಪ ಒಡೆಯನ ಕುಲಗುರು ವಾಗಿದ್ದನು. ಆ ಒಡೆಯ ತನ್ನ ಗುರುವಿನ ಇಷ್ಟದಂತೆ ಸಿದ್ಧ ಲಿಂಗರಿಗೆ ಎಡೆಯೂರಿನಲ್ಲಿ ಭವ್ಯವಾದ ಶಿಲಾಮಠವನ್ನು ಕಟ್ಟಿಸಿ ಕೊಟ್ಟನು. "ತೋಂಟದ ಸ್ವಾಮಿಯ ಪಾದಪದ್ಮಾರಾಧಕರಾದ ದಾನನಿವಾಸ ನಿವಾಸಿಗಳಾದ ಚೆನ್ನರಾಯ ಒಡೆಯರು. ಚೆನ್ನ ರಾಯ ಒಡೆಯರ ಮಕ್ಕಳು ಲಿಂಗಪ್ಪ ಒಡೆಯರು, ಲಿಂಗಪ್ಪ ಒಡೆಯರ ಮಕ್ಕಳು ಪಾದೋದಕಪ್ರಸನ್ನಸಂಪನ್ನರಾದ ಚೆನ್ನ ವೀರಪ್ಪ ಒಡೆಯರು, ಚೆನ್ನವೀರಪ್ಪ ಒಡೆಯರ ಸತಿ ಪಾರ್ವತಮ್ಮ ದಂಪತಿಗಳು ತಮ್ಮ ಭಕ್ತಿಯಿಂದ ತೋಂಟದ ಸ್ವಾಮಿಗೆ ಕಲ್ಲು ಮಠವ ಕಟ್ಟಬೇಕೆಂದು ಚಿಟ್ಟಿಗದೇವರಿಗೆ ಪದಾರ್ಥವಂ ಕೊಟ್ಟು ನಮಸ್ಕಾರಮಂ ಮಾಡಲಾಗಿ ಭಕ್ತಿಪದಾರ್ಥಮಂ ಕೈಕೊಂಡು ಎಡೆಯೂರಿಗೆ ಬಿಜಯಂಗೈದು ತೋಂಟದ ಸ್ವಾಮಿಗೆ ಕಲ್ಲು ಮಠವನ್ನು ಎಂಟು ಜಟೆಯ ಬಗೆಯ ಹಿರಿಯರು ಚಿಟ್ಟಿಗ

ದೇವರು ಕಟ್ಟಿಸಿದರು" ಎಂದು ಎಡೆಯೂರು ಸಿದ್ಧಲಿಂಗೇಶ್ವರ ಸ್ವಾಮಿಯ ದೇವಸ್ಥಾನದ ಪ್ರಾಕಾರದಲ್ಲಿ ಸುಮಾರು ಕ್ರಿ.ಶ. ೧೫೦೦ರಲ್ಲಿ ಬರೆದ ಶಿಲಾಶಾಸನದಲ್ಲಿ ಉಕ್ತವಾಗಿದೆ. ಕ್ರಿ.ಶ. ೧೫೦೦ಕ್ಕಿಂತಲೂ ಹಿಂದೆಯೇ ಎಡೆಯೂರಿನಲ್ಲಿ ಸಿದ್ಧಲಿಂಗರ ಮಠ ನಿರ್ಮಾಣವಾಯಿತೆಂದು ನಿರ್ಧರವಾಗಿ ತಿಳಿದುಬರುತ್ತದೆ. ಸಿದ್ಧಲಿಂಗರು ಲಿಂಗೈಕ್ಯರಾಗುವವರೆಗೂ ಆ ಮಠದಲ್ಲಿಯೇ ಶಿವ ಯೋಗನಿರತರಾಗಿದ್ದರು. ಅವರು ತಮ್ಮ ಪರಮಾಪ್ತ ಶಿಷ್ಯ ಬೋಳ ಬಸವೇಶ್ವರರಿಗೆ ನಿರಂಜನ ಗುರುಪಟ್ಟವನ್ನು ಕಟ್ಟಿ, ಅನಂತರ ಎಡೆಯೂರು ಕಲ್ಲುಮಠದಲ್ಲಿ ನಿರ್ವಿಕಲ್ಪ ಸಮಾಧಿ ಯನ್ನು ಹೊಂದಿದರು. ಅನಂತರ ಎಡೆಯೂರಿನಲ್ಲಿ ಆ ಗದ್ದುಗೆ ಯನ್ನು ಒಳಗೊಂಡು ಈಗಿರುವ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ದೇವಾಲಯ ನಿರ್ಮಾಣವಾಯಿತು.

೭

ಭಾರತೀಯ ತತ್ತ್ವದರ್ಶನ ಅತ್ಯಂತ ಪ್ರಾಚೀನವಾದುದು. ವೀರಶೈವರು ವೇದಗಳನ್ನು ನಂಬುತ್ತಾರೆ. ಅಂಗಲಿಂಗ ಸಾಮ ರಸ್ಯವೇ ವೀರಶೈವ ಸಿದ್ಧಾಂತ. ಇದನ್ನು ಷಟ್‌ಸ್ಥಲ ದರ್ಶನ ವೆಂದೂ ಕರೆಯುತ್ತಾರೆ. ಇದು ಕರ್ಣಾಟಕದಲ್ಲಿ–ದಕ್ಷಿಣ ಭಾಗ ದಲ್ಲಿ ತೋಂಟದ ಸಿದ್ಧಲಿಂಗಯತಿವರ್ಯರಿಂದ ಪರಿಪೂರ್ಣಸ್ಥಿತಿ ಯನ್ನು ಪಡೆಯಿತು. ಅವರ ಆಧ್ಯಾತ್ಮಿಕ ಔನ್ನತ್ಯ, ಸಮಾಜ ಪರಿಷ್ಕರಣ ದೃಷ್ಟಿ, ಪೂರ್ವಾಚಾರ ಸಮನ್ವಯಭಾವ, ಸಿದ್ಧಾಂತ ಜ್ಞಾನ, ಶಿವಯೋಗ ಶಕ್ತಿ ಇವು ಅವರಿಗೆ ಪಂಚಪ್ರಾಣ ಸ್ವರೂಪ ವಾಗಿದ್ದುವು. ಅಲ್ಲಮರ ಆಧ್ಯಾತ್ಮಶಕ್ತಿ, ಬಸವಣ್ಣನವರ ಧರ್ಮ ನಿಷ್ಠೆ, ಚನ್ನಬಸವಣ್ಣನವರ ಜ್ಞಾನದೀಪ್ತಿ, ಸಿದ್ಧರಾಮರ

ಕರ್ಮಕೌಶಲ, ರೇಣುಕರ ತತ್ತ್ವಪ್ರಜ್ಞೆ—ಇವು ಸಿದ್ಧಲಿಂಗರಲ್ಲಿ ಪೂರ್ಣ ರೂಪದಲ್ಲಿ ಪ್ರಕಾಶಿಸಿದುವು. "ತೋಂಟದ ಸಿದ್ಧಲಿಂಗ, ಅಲ್ಲಮಪ್ರಭು, ಅನಿಮಿಷದೇವರು ಇಂತಿವರು ವಿರಕ್ತರಲ್ಲದೆ ಮತ್ತೆ ವಿರಕ್ತರೆಂಬ ನುಡಿ ನಿಮ್ಮ ಹಡಪದಲ್ಲಿರಲಿ" ಎಂದು ಘನ ಲಿಂಗದೇವ ತನ್ನ ವಚನದಲ್ಲಿ ಹೇಳಿದ್ದಾನೆ. ಸಿದ್ಧಲಿಂಗರು ಅಪ್ರತಿಮ ವೈರಾಗ್ಯ ಪುರುಷರೆಂಬುದನ್ನು ಅವರ ಶಿಷ್ಯ ಘನಲಿಂಗ ದೇವ ತನ್ನ ವಚನಗಳಲ್ಲಿ ಆಡಿದ್ದಾನೆ. ಅವನ ಮಾತಿನಲ್ಲಿ ಸಂಶಯವಿಲ್ಲ. ವೀರಶೈವರಲ್ಲಿ ಸಿದ್ಧಲಿಂಗರು ಅತ್ಯಂತ ಮಹಿಮಾ ವಂತ ಗುರು. ಅವರ ಶಿಷ್ಯಪರಂಪರೆ ಅಪಾರ; ಅವರು ನಿರಂಜನ ಸಿದ್ಧರು; ಅನೇಕ ಕವಿಗಳೂ ಶಿವಶರಣರೂ ಸಿದ್ಧಲಿಂಗರನ್ನು ತಮ್ಮ ಕಾವ್ಯಗಳಲ್ಲಿ ಸ್ತೋತ್ರ ಮಾಡಿದ್ದಾರೆ. ಅನೇಕ ಗುರು ವಿರಕ್ತರು ತಮ್ಮ ಮೂಲವನ್ನು ಸಿದ್ಧಲಿಂಗಯತಿಗಳಿಂದ ಪ್ರಾರಂಭಿ ಸಿರುತ್ತಾರೆ. "ಪ್ರಾಯಶಃ ಸಾರಸ್ವತ ಪ್ರಪಂಚದಲ್ಲಿ ಇಂತಹ ಉಜ್ವಲವಾದ ಶಿಷ್ಯಪರಂಪರೆಯನ್ನು ಪಡೆದ ಸಾಹಿತ್ಯ ಗುರು ಬೇರೊಬ್ಬರಿರಲಿಕ್ಕಿಲ್ಲವೆನಿಸುತ್ತದೆ" ಎಂದು ಡಾ. ಆರ್.ಸಿ. ಹಿರೇಮಠ್ ಅವರು ಹೇಳಿದ್ದಾರೆ. ಈ ಮಾತಿನಲ್ಲಿ ಉತ್ಪ್ರೇಕ್ಷೆ ಯಿಲ್ಲ. ಇವರ ದೀಕ್ಷಾಗುರು ಗೋಸಲ ಚನ್ನಬಸವೇಶ್ವರರು. "ಕ್ಷೇತ್ರಜ್ಞ ಸುಮನೋವಾದ" ಎಂಬ ಸಂಸ್ಕೃತ ಗ್ರಂಥವನ್ನು ಬರೆದಿರುತ್ತಾರೆ. ಇಂಥ ವಿಶಿಷ್ಟ ಗುರುಸಾನ್ನಿಧ್ಯ ಮತ್ತು ಜ್ಞಾನ ಪೂರ್ಣಶಿಷ್ಯ ಪರಂಪರೆ ತೋಂಟದ ಸಿದ್ಧಲಿಂಗರ ದಿವ್ಯ ವ್ಯಕ್ತಿತ್ವ ವನ್ನು ರೂಪಿಸುತ್ತವೆ. ಅವರ ತಪೋಜೀವನ, ಆಧ್ಯಾತ್ಮಿಕ ಸಾಧನೆ, ಶಿವಜ್ಞಾನಸಿದ್ಧಿ—ಇವು ಸಮಾಜದ ತಾತ್ವಿಕ, ಧಾರ್ಮಿಕ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಅಚ್ಚಳಿಯದ ಪ್ರಭಾವ ವನ್ನು ಬೀರಿದುವು. ಅವರು ಸಂಸಾರ ಜೀವನದಲ್ಲಿ ಐಹಿಕ ಸುಖ

ಭೋಗಗಳನ್ನು ಬಯಸಲಿಲ್ಲ; ಅಂಗನೆಯರ ಶೃಂಗಾರಲೀಲಾ ರಂಗದಲ್ಲಿ ತಣಿಯಲು ಅಪೇಕ್ಷಿಸಲಿಲ್ಲ; ಧನಕನಕವಸ್ತು ವಾಹನ ಗಜತುರಗ ಅಷ್ಟ ಭೋಗಗಳನ್ನು ಬಯಸಲಿಲ್ಲ. ಅವರು ಮಾಯಾ ವಿರಕ್ತರಲ್ಲ; ಸಹಜವಿರಕ್ತರು. ಅವರು ಲಿಂಗಭಕ್ತಿನಿಷ್ಠರು. ಅವರು ವಿರತ ಜೀವನದಲ್ಲಿ ಮುಕ್ತಿಯನ್ನು ಕಂಡ ಮಹಾಂತರು! ಅಷ್ಟಾವರಣ ತತ್ತ್ವಾತ್ಮಕವಾದ ವೀರಶೈವ ಸಮಾಜದಲ್ಲಿ ಗುರು ಪದವಿಯಲ್ಲಿರುವವರಾಗಲಿ, ಜಂಗಮಸ್ಥಲದಲ್ಲಿರುವವರಾಗಲಿ, ವಿರಕ್ತರಾಗಲಿ ಮದುವೆಯಾಗುವ ಸಂಪ್ರದಾಯವಿಲ್ಲ. ಸಿದ್ಧ ಲಿಂಗರು ಸಮಾಜದಲ್ಲಿ ಗುರು ಪದವಿಯಲ್ಲಿದ್ದರು, ಜಂಗಮಪದವಿ ಯಲ್ಲಿದ್ದರು, ವಿರಕ್ತಪದವಿಯಲ್ಲಿದ್ದರು. ಎಲ್ಲಕ್ಕಿಂತಲೂ ಮಿಗಿ ಲಾಗಿ ಅವರು ಆಜನ್ಮವಿರತರು. ಅವರು ತಮ್ಮ ತಪೋ ಜೀವನದಿಂದ ಲೋಕದ ಅಜ್ಞಾನವನ್ನು ಪರಿಹರಿಸಿ, ಜನರ ದುಃಖಕಾರ್ಪಣ್ಯಗಳನ್ನು ನಿವಾರಿಸಿ, ಶಿವನನ್ನು ಜನತಾ ಪರಮೇಶ್ವರ ರೂಪದಲ್ಲಿ ಆರಾಧಿಸಿದರು; ಆನಂದಿಸಿದರು.

''ಅಂಗಾಲ ಕಣ್ಣವರ ಪದವಿ ಅವರಿಗೇ ಇರಲಿ, ಮೇಗಾಲ ಕಣ್ಣವರ ಪದವಿ ಅವರಿಗೇ ಇರಲಿ. ಪಂಚಮುಖ ನೊಸಲ ಕಣ್ಣು ನಂದಿವಾಹನರಪ್ಪ ಗಂಗೆವಾಳುಕ ಸಮರುದ್ರರ ಪದವಿ ಅವರಿಗೇ ಇರಲಿ. ಸಾಲೋಕ, ಸಾಮೀಪ್ಯ. ಸಾರೂಪ್ಯ, ಸಾಯುಜ್ಯ ಪದವಿಗಳು ಅವರಿಗೇ ಇರಲಿ. ಎನಗೆ ಆವ ಫಲವೂ ಬೇಡ. ನಾನು ನಿಮ್ಮ ಪದದೊಳಗೆ ಅಡಗಿ ಎನಗೆ ನಿನಗೆ ಭಿನ್ನ ವಿಲ್ಲದಿಪ್ಪಪರಮಭಕ್ತಿ ಸಂಪದವನೆ ಕೊಡು'' ಎಂದು ಅವರು ತಮ್ಮ ತಪಃಫಲವನ್ನು ನಿರೂಪಿಸಿರುತ್ತಾರೆ. ಇದು ಅವರ ಉಪಚಾ ರೋಕ್ತಿಯಲ್ಲ; ಇದು ಅವರ ವೀರವಾಣಿ. ''ಬ್ರಹ್ಮಪದವಿಯ ಪಡೆ ದಿಹೆನೆಂಬುದು ಭ್ರಮೆ; ವಿಷ್ಣುಪದವಿಯ ಪಡೆದಿಹೆನೆಂಬುದು

ತೃಷ್ಣೆ; ಇಂದ್ರಪದವಿಯ ಪಡೆದಿಹೆನೆಂಬುದು ಬಂಧನ ; ದೇವತಾದಿಗಳ ಪದವಿಯ ಪಡೆದಿಹೆನೆಂಬುದು ಗಾವಿಲತನ; ರುದ್ರ ಪದವಿಯು ಮಾತೂ ಹಾಗಿರಲಿ, ಏಕೆಂದರೆ ಇವೆಲ್ಲಾ ಅನಿತ್ಯ''. ಇವೆಲ್ಲಕ್ಕಿಂತಲೂ ಮೇಲಾದ ಪದವಿಯೇ ನಿತ್ಯತ್ವಪದ—ಎಂದು ಸಿದ್ಧಲಿಂಗರು ತಮ್ಮ ಜೀವನಧ್ಯೇಯವನ್ನು ಸಾರಿದ್ದಾರೆ. ಇದಕ್ಕಿಂತಲೂ ಉನ್ನತವಾದ ಧ್ಯೇಯವಿನ್ನುಂಟೆ? ಅವರು ಜನತಾ ಪರಮೇಶ್ವರನ ಹೃದಯದಲ್ಲಿ ಐಕ್ಯರಾದರು. ಅವರು ಶಿವಯೋಗ ಸ್ವರೂಪವನ್ನು ಸ್ವಾನುಭವಪೂರ್ಣವಾಗಿ ತಿಳಿಸಿದರು. ಲಿಂಗಾಂಗ ಸಾಮರಸ್ಯವ ಸಾಧಿಸುವ ಅನುಷ್ಠಾನ ರೀತಿಯೇ ಶಿವಯೋಗ. ಗಾಳಿಗೊಡ್ಡಿದ ಸೊಡರಿನಂತೆ ಚಂಚಲವಾದ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಗೊಳಿಸುವುದೇ ಮೋಕ್ಷ ಸಾಧನೆಯ ಪ್ರಥಮ ಸೋಪಾನ. ಯೋಗದಲ್ಲಿ ಜ್ಞಾತೃ, ಜ್ಞಾನ, ಜ್ಞೇಯ-ಈ ತ್ರಿಪುಟ ಸಾಮರಸ್ಯವೇ ಮುಖ್ಯ. ಇದು ಇಷ್ಟಲಿಂಗಪೂಜೆಯಲ್ಲಿ ಸಹಜಸಾಧ್ಯವಾಗುತ್ತದೆಂದು ತಿಳಿಸಿ, ಹಠಯೋಗ, ಲಯಯೋಗ, ರಾಜಯೋಗ, ಮಂತ್ರಯೋಗ ಮೊದಲಾದ ಹಲವು ರೀತಿಯ ಯೋಗಗಳಲ್ಲಿ ಶಿವಯೋಗವೇ ಶ್ರೇಷ್ಠವೆಂದು ಅವರು ನಿರ್ಣಯಿಸಿದರು. ಶಿವಯೋಗಿ ವೃಂದದಲ್ಲಿ ಸಿದ್ಧಲಿಂಗರ ಸ್ಥಾನ ಅದ್ವಿತೀಯ ಸ್ಥಾನವಾಗಿದೆ. ಇವರು ವೀರಶೈವರಲ್ಲಿ ಶಿವಯೋಗಿವರ್ಯರೆಂದು ಇಂದಿಗೂ ಪೂಜ್ಯರಾಗಿದ್ದಾರೆ.

೮

ಎಡೆಯೂರು ಪುರಾತನ ಶಿವಕ್ಷೇತ್ರವೆಂದು ಸಿದ್ಧಲಿಂಗಯತಿವರ್ಯರು ಅರಿತಿದ್ದರೆಂದು ತಿಳಿಯಲು ಅವಕಾಶವಿದೆ. ಸಿದ್ಧಲಿಂಗೇಶ್ವರ ಸ್ವಾಮಿಯ ದೇವಾಲಯದ ಮಹಾದ್ವಾರದ ಬಲ

ಗಡೆಯ ಕೈಸಾಲೆಯಲ್ಲಿರುವ ಶಾಸನಶಿಲೆಯ ಬಲಗಡೆಯಲ್ಲಿ ಸುಮಾರು ಆರು ಅಡಿ ಎತ್ತರದ ಚಪ್ಪಡಿಯಮೇಲೆ ಸಿದ್ಧಲಿಂಗರು ಶಿವಪೂಜೆ ಮಾಡುತ್ತಿರುವಂತೆ ಕೆತ್ತಿರುವ ಪ್ರತಿಮೆಯಿದೆ. ಅದೇ ಚಪ್ಪಡಿಯ ತಳಭಾಗದಲ್ಲಿ ಚನ್ನವೀರಪ್ಪ ಒಡೆಯ ಮತ್ತು ಆತನ ಪತ್ನಿ ಪಾರ್ವತಮ್ಮ ಇವರ ಭಕ್ತ ವಿಗ್ರಹಗಳಿವೆ. ಮಹಾದ್ವಾರದ ಒಳಭಾಗದಲ್ಲಿ ಅಷ್ಟ ದಿಕ್ಪಾಲಕರನ್ನು ಚಿತ್ರಿಸಿರುತ್ತಾರೆ. ಈ ದೇವಾಲಯ ಮಠದ ಪೂರ್ವ ದಿಗ್ಭಾಗದಲ್ಲಿ ವೀರಭದ್ರಸ್ವಾಮಿಯ ದೇವಾಯಲವೊಂದಿದೆ. ಇದು ಈ ದೇವಾಲಯಕ್ಕಿಂತಲೂ ಪ್ರಾಚೀನ ವಾದುದೆಂದು ಇತಿಹಾಸದಿಂದ ಗೊತ್ತಾಗುತ್ತದೆ. ಅನೇಕ ರಾಜರೂ ಶ್ರೀಮಂತರೂ ಮೈಸೂರು ಒಡೆಯರೂ ಈ ದೇವಾಲಯಕ್ಕೆ ಅನೇಕ ದತ್ತಿಗಳನ್ನು ಕೊಟ್ಟಿರುತ್ತಾರೆ. ಪ್ರತಿವರ್ಷವೂ ಚೈತ್ರ ಶುದ್ಧ ಸಪ್ತಮಿಯ ದಿನ ಇಲ್ಲಿ ಸಿದ್ಧಲಿಂಗೇಶ್ವರರ ರಥೋತ್ಸವ ನಡೆಯುತ್ತದೆ. ಅಂದು ಅವರು ಜೀವನ್ಮುಕ್ತರಾಗಿರ ಬಹುದು! ಇಲ್ಲಿ ಚಿತ್ರಮಠ ಮತ್ತು ಗವಿಮಠ ಎಂಬ ಎರಡು ಮಠಗಳಿವೆ. ಈ ಎರಡು ಮಠಗಳೂ ಈಚೆಗೆ ಈ ಪ್ರದೇಶದಲ್ಲಿ ನಿರ್ಮಾಣವಾದ ಮಾರ್ಕೋನಹಳ್ಳಿ ಜಲಾಶಯದಲ್ಲಿ ಮುಳುಗಿ ಹೋಗಿವೆ. ಇಲ್ಲಿಗೆ ಸಮೀಪದಲ್ಲಿ ಕಗ್ಗೆರೆ ಇದೆ. ಅಲ್ಲಿ ಸಿದ್ಧ ಲಿಂಗೇಶ್ವರರು ತಪಸ್ಸು ಮಾಡಿದ ಸ್ಥಳದಲ್ಲಿ ದೇವಾಲಯವಿದೆ. ಅದರ ಗರ್ಭಗೃಹದಲ್ಲಿ ಯೋಗಪೀಠವಿದೆ. ಸಿದ್ಧಲಿಂಗರು ಶಿವ ಯೋಗದಲ್ಲಿದ್ದಾಗ ಅವರ ಮೇಲೆ ಹುತ್ತ ಬೆಳೆದಿದ್ದುದನ್ನು ತೋರಿಸುವ ಚಿತ್ರವನ್ನು ಅದೇ ದೇವಾಲಯದ ಕೈಸಾಲೆಯ ಒಳಮಾಳಿಗೆಯಲ್ಲಿ ಚಿತ್ರಿಸಿರುತ್ತಾರೆ. ಅಲ್ಲಿ ಪ್ರತಿವರ್ಷವೂ ಫಾಲ್ಗುಣ ಶುದ್ಧ ಸಪ್ತಮಿಯ ದಿನ ಸಿದ್ಧಲಿಂಗೇಶ್ವರಸ್ವಾಮಿಯ ರಥೋತ್ಸವ ನಡೆಯುತ್ತದೆ. ಅವರಿಗೆ ಲಿಂಗಾಂಗ ಸಾಮರಸ್ಯ ಜ್ಞಾನೋದಯ

ವಾದ ದಿನದ ಸಂಕೇತವೆಂಬಂತೆ ಈ ರಥೋತ್ಸವ ಅಂದು ನೆರ ವೇರುತ್ತದೆ.

ಸಿದ್ಧಲಿಂಗರು ಪರಮಾರ್ಥ ತತ್ತ್ವಸಿದ್ಧರು. ಅದರಂತೆಯೇ ಅವರು ಸಾಹಿತ್ಯಸಿದ್ಧರು. ಅವರು ಅತ್ಯಂತ ಗಹನ ಸಿದ್ಧಾಂತ ವಿಚಾರಗಳನ್ನು ವಚನ ಪ್ರಕಾರದಲ್ಲಿ ಸುಂದರವಾಗಿ ಹೇಳಿದ್ದಾರೆ. ಅವರ 'ಷಟ್‌ಸ್ಥಲ ಜ್ಞಾನಸಾರಾಮೃತ' ಒಂದು ಸಿದ್ಧೋಪ ನಿಷತ್ತು ; ಅವರು 'ಜಂಗಮ ರಗಳೆ' ಎಂಬ ಗ್ರಂಥವನ್ನೂ ಬರೆ ದಿರಬಹುದೆಂದು ಪಂಡಿತರು ಊಹಿಸಿರುತ್ತಾರೆ. "ಮೂರುಸಾವಿರದ ತೋಂಟದ ಸಿದ್ಧೇಶ್ವರನ ಅಂತರ್ಭಾವ ಮನಃ ಕರಕಮಲದಲ್ಲಿ ಶಿವಲಿಂಗಪ್ರಾಣಿ ಶಿವಮಂತ್ರ ಶರೀರಿಯಾಗಿ ಅವತರಿಸಿದ ಶ್ರೀ ಮತ್ಸಾನಂದ ಶಿವಯೋಗಿ ಮಂತ್ರಮೂರ್ತಿ" ಎಂದು ಸಾನಂದ ಶಿವಯೋಗಿ ಎಂಬ ಶಿವಕವಿ ಹೇಳಿಕೊಂಡಿದ್ದಾನೆ. ಆದ್ದರಿಂದ ಸಿದ್ಧ ಲಿಂಗರು "ಮೂರು ಸಾವಿರದ ತೋಂಟದ ಸಿದ್ಧೇಶ್ವರ"ರೆಂದೇ ಆಗ ವಿಖ್ಯಾತರಾಗಿದ್ದರೆಂದು ವ್ಯಕ್ತವಾಗುತ್ತದೆ. ಸಿದ್ಧಲಿಂಗರು ತಮ್ಮ ಶಿಷ್ಯ ಚಂದ್ರಶೇಖರ ದೇಶಿಕನಿಗೆ "ಭುವನಕೋಶ, ಧರ್ಮಾ ಧರ್ಮ ವಿಚಾರ. ಶಿವನಪಂಚವಿಂಶತಿಲೀಲೆಗಳು, ಷಟ್‌ಸ್ಥಲ ಕ್ರಮ ಮುಂತಾದ ವಿಷಯಗಳನ್ನು ಕಗ್ಗೆರೆಯಲ್ಲಿ ಬೋಧಿಸಿದರು ಎಂದು ತೋಂಟದ ಸಿದ್ಧೇಶ್ವರ ಪುರಾಣದಲ್ಲಿ ಉಕ್ತವಾಗಿದೆ. ಈ ವಿಚಾರಗಳನ್ನೆಲ್ಲಾ ಅವರು ಗ್ರಂಥ ರೂಪದಲ್ಲಿ ಬರೆದಿರಲೂ ಸಾಧ್ಯವುಂಟು, ಅದೇನೇ ಇರಲಿ, ಸಿದ್ಧಲಿಂಗರು ವಿದ್ಯಾಘನರು, ಅವರ ವಚನಗಳಲ್ಲಿ ಶಾಸ್ತ್ರಸಂಪತ್ತಿದೆ; ಸಾಹಿತ್ಯ ವೈಭವವಿದೆ: ಆತ್ಮಚಿಂತನೆ ಇದೆ; ಕಾವ್ಯಸೌಂದರ್ಯವಿದೆ. ಅವುಗಳಲ್ಲಿ ಶಾಸ್ತ್ರ ಮತ್ತು ಸಾಹಿತ್ಯ ಅನ್ಯೋನ್ಯಪೂರಕವಾಗಿದೆ. ಎಲ್ಲರೂ ವಚನರಚನೆ ಮಾಡಲಾರರೆಂಬುದು ಅವರ ಅಭಿಪ್ರಾಯ.

'ನವಿಲಾಡಿತೆಂದು ಕೆಂಬೋತ ಪುಕ್ಕವ ತೆರಕೊಂಡಂತೆ, ಹುಲಿಯ ಬಣ್ಣಕ್ಕೆ ನರಿ ಮೈಸುಟ್ಟುಕೊಂಡಂತೆ, ಕೋಗಿಲೆ ಸರಗೆಯ್ದು ದೆಂದು ಕಾಗೆ ಕರದಂತೆ, ಲಿಂಗನಿಷ್ಠನಾಗಿ ವಚನ ಹಾಡಿದರೆ ಒಪ್ಪುವನಲ್ಲದೆ ನಿಷ್ಠೆಹೀನರು ಓದಿ ಹಾಡಿದರೆ ನಳ್ಳಿಗುಳ್ಳಿಯ ತಿಂದ ನರಿಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬೊಗಳಿದಂತೆ' ಎಂದು ಹೇಳಿದ್ದಾರೆ. ಅವರು ಲೋಕಜೀವನದಲ್ಲಿ ನೋವು, ನಲಿವು, ದುಃಖ, ದಾರಿದ್ರ್ಯ, ಅಜ್ಞಾನ, ಅಸತ್ಯ, ಹಿಂಸೆ, ಮೋಸ, ಆಸೆ, ಆಕಾಂಕ್ಷೆ, ಅಹಂಕಾರ, ಮಮಕಾರ, ವಾಗಾಡಂಬರ, ಸ್ವಪ್ರತಿಷ್ಠೆ ಮೋಹ, ದ್ರೋಹಗಳನ್ನು ಕಂಡು ಮರುಗಿದರು. ಅವರು ಜನಮನದ ಮಾಲಿನ್ಯವನ್ನು ತಮ್ಮ ಉಪದೇಶ ಜಲದಿಂದ ತೊಳೆದರು. ಆಳತೆಗೆಟ್ಟು ಬೆಳೆದಿದ್ದ ಅಂಧಸಂಪ್ರದಾಯಗಳನ್ನು ತಪ್ಪಿಸಿ, ಲಿಂಗಾಚಾರ, ಶಿವಾಚಾರ, ಸದಾಚಾರ, ಗಣಾಚಾರ, ಭೃತ್ಯಾಚಾರ—ಎಂಬ ಪಂಚ ಆಚಾರಗಳನ್ನು ಬೋಧಿಸಿದರು. ದುರಾಚಾರಗಳನ್ನು ತೊಲಗಿಸಿ ಶಿಷ್ಟಾಚಾರಗಳನ್ನು ಉಪದೇಶಿಸಿದರು.

ಸಿದ್ಧಲಿಂಗರ ಶಿಷ್ಯಪರಂಪರೆ ದಕ್ಷಿಣ ಕರ್ನಾಟಕದಲ್ಲಿ ವೀರಶೈವ ಸಮಾಜದಲ್ಲಿ ಹೊಸ ಶಕ್ತಿಯನ್ನು ತುಂಬಿತು. ನಾನಾ ಶೈವ ಪಂಗಡಗಳೂ ವೀರಶೈವ ಧರ್ಮದಲ್ಲಿ ಸಮಾವೇಶಗೊಂಡವು. ಸನಾತನ ವೀರಶೈವರಲ್ಲಿ ಉದಾರ ಚಿತ್ತವೃತ್ತಿಯನ್ನೂ ವಿಶಾಲ ದೃಷ್ಟಿಯನ್ನೂ ಅವರು ಮೂಡಿಸಿದರು. ಇದರಿಂದ ಸತ್ವಪೂರ್ಣ ವೀರಶೈವ ಧರ್ಮ ರೂಪುಗೊಂಡಿತು. ಅವರು ಸಮಾಜದಲ್ಲಿದ್ದ ಕುಂದುಕೊರತೆಗಳನ್ನು ಅರಿತಂತೆಯೇ ತಮಗಿಂತಲೂ ಹಿಂದೆ ಇದ್ದ ಸಮಾಜದ ಜೀವಂತ ಚಿತ್ರವನ್ನೂ ಪರಿಭಾವಿಸಿದರು. ಅವರು ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರಗಳನ್ನು ವಿವರಿಸಿ, ಸಮಾಜವನ್ನು ಚೇತನಗೊಳಿಸಿದರು. ಜಾತಿ–ಕುಲ,

ಗೋತ್ರ, ಹೆಣ್ಣು-ಗಂಡು, ಕೀಳು-ಮೇಲೆಂಬ ತಾರತಮ್ಯ ಭಾವನೆ ಗಳನ್ನು ಕಿತ್ತೊಗೆದು ವೀರಶೈವ ಧರ್ಮವನ್ನು ವಿಶ್ವಧರ್ಮವೆಂದು ಸಾರಿದರು. ಅವರ ಕ್ರಿಯಾಶಕ್ತಿಯನ್ನು, ಜ್ಞಾನಪ್ರಭೆಯನ್ನು, ವ್ಯಕ್ತಿ ಸ್ವರೂಪವನ್ನು ಅಂದಿನ ಮತ್ತು ಮುಂದಿನ ಕವಿಲೋಕ ಮುಕ್ತ ಕಂಠದಿಂದ ಕಾವ್ಯವಾಣಿಯಲ್ಲಿ ಹಾಡಿತು.

೬

ಸಿದ್ಧಲಿಂಗರು ಸ್ತುತಿಪ್ರಿಯರಲ್ಲ; ಧರ್ಮನಿಷ್ಠರು. ಅವರು ಶಿವಾಚಾರ್ಯರಲ್ಲಿ ಪರಮ ಆಚಾರ್ಯರು ; ಶಿವಜ್ಞಾನಿಗಳಲ್ಲಿ ಮಹಾಜ್ಞಾನಿ ; ವಿರಾಗಿಗಳಲ್ಲಿ ವೀರವಿರಾಗಿ ; ಶರಣರಲ್ಲಿ ಸರ್ವ ಶರಣ; ಜಂಗಮರಲ್ಲಿ ಪೂಜ್ಯಜಂಗಮ; ವಿರತರಲ್ಲಿ ಅದ್ವಿತೀಯ ವಿರತ; ಶಿವಯೋಗಿಗಳಲ್ಲಿ ಶ್ರೇಷ್ಠ ಶಿವಯೋಗಿ ! ಅವರು ಐಕ್ಯ ಸ್ಥಲದಲ್ಲಿ ನಿಂತ ಜೀವನ್ಮುಕ್ತರು. ಆ ಸ್ಥಿತಿಯಲ್ಲಿ ಜೀವಾತ್ಮ ನಿತ್ಯಾನಂದ ಸ್ವರೂಪನಾಗಿರುತ್ತಾನೆ; ನಿತ್ಯತೃಪ್ತನಾಗಿರುತ್ತಾನೆ. ''ನಿತ್ಯತೃಪ್ತರಿಗೆ ಹಸಿವಿನ ಭಯವುಂಟೆ? ಸತ್ಯಜ್ಞಾನಿಗೆ ಜ್ಞಾನದ ಭಯವುಂಟೆ? ವಾತಪಿತ್ತ ಶ್ಲೇಷ್ಮನಷ್ಟವಾದವಂಗೆ ತಾಪತ್ರಯಾದಿ ಗಳ ಭಯವುಂಟೆ ? ಸ್ವಯಂಜ್ಯೋತಿಯ ಬೆಳಗುಳ್ಳಾತನು ಚಂದ್ರಸೂರ್ಯಾದಿಗಳ ಬೆಳಗನಾಶ್ರಯಿಸುವನೇ ? ನಿಜದಿಂದ ತನ್ನ ತಾನರಿದು ತಾನು ತಾನಾದಾತನು ಮಾಯದ ಗಜಬಜೆಯ ಹುಸಿಗೆ ಬೆದರುವನೆ?'' ಇದು ಅವರು ಪಡೆದ ಯೋಗಸಿದ್ಧಿ ! ಈ ಯೋಗಸಿದ್ಧಿಯೇ ಸಿದ್ಧಲಿಂಗಸ್ಥಿತಿ ! ಶರಣರಲ್ಲಿ ಅವರೇ ಪ್ರಥಮ ಸಿದ್ಧಲಿಂಗರು! ಆ ಹೆಸರು ಹಿಂದೆ ಯಾರಿಗೂ ಇರಲಿಲ್ಲ. ಅದು ಮುಂದೆ ಶಿವ ಜೀವೈಕ್ಯ ಸ್ಥಿತಿಯ ಪರ್ಯಾಯನಾಮ ವಾಯಿತು. ಅವರ ಸಾಹಿತ್ಯ ಜ್ಞಾನ ಸಾಧಾರಣವಾದುದಲ್ಲ.

ಅವರ ಶೈಲಿ ಬಂಧುರವಾಗಿದೆ. ಅವರು ಬಳಸುವ ಉಪಮೆಗಳೂ, ನಾಣ್ಣುಡಿಗಳೂ ಅವರ ಲೋಕಾನುಭವವನ್ನು ವ್ಯಕ್ತಪಡಿಸುತ್ತವೆ. ಅವರು ಹೇಳಬೇಕಾದುದನ್ನು ಸಾಮಾನ್ಯಜನರೂ ಗ್ರಹಿಸುವಂತೆ ಸರಳವಾಗಿ ಹೇಳುತ್ತಾರೆ. ತಿಳಿಸಬೇಕಾದುದನ್ನು ನೇರವಾಗಿ ತಿಳಿಸುತ್ತಾರೆ. ಅವರು ಯಾವೊಂದು ಶಾಸ್ತ್ರವನ್ನೂ ರಚಿಸಲಿಲ್ಲ ಆದರೆ ಶಾಸ್ತ್ರದ ಸ್ಥಾನಗೌರವವನ್ನು ಹೆಚ್ಚಿಸಿದರು. ಪಂಚಸಾದಾಖ್ಯಗಳು ಸದಾ ಶಿವತತ್ತ್ವದಿಂದ ಉದಯವಾದುವೆಂದು ಶಿವಾಗಮಗಳು ಹೇಳಿದುವು. ಈ ಜಗತ್ತು ಶೂನ್ಯದಿಂದ ಉದಯವಾಯಿತೆಂದು ಪುರಾತನರು ಹೇಳಿದರು. ಶರಣರು ಆ ತತ್ತ್ವಗಳನ್ನು ನಂಬಿದರು. ಆದರೆ ಸಿದ್ಧಲಿಂಗರು ಷಟ್‌ಸಾದಾಖ್ಯಗಳೆಂಬ ಹೊಸ ದೃಷ್ಟಿಯನ್ನು ತೋರಿಸಿದರು. ಶೂನ್ಯ ನಿರಾಲಂಬ ಶೂನ್ಯದ ಮೂಲವೆಂಬ ಹೊಸ ಸಿದ್ಧಾಂತವನ್ನು ಸಾರಿದರು. ಅವರ ವಚನಗಳಲ್ಲಿ ಧ್ವನಿ, ರಸ, ರೀತಿ ಯಾವುದೂ ಹೊಸದಲ್ಲವಾದರೂ, ಅವರು ತಮ್ಮ ವಚನಗಳಲ್ಲಿ ಆತ್ಮ ಪರಾಮರ್ಶೆಯನ್ನು ವ್ಯಕ್ತಪಡಿಸಿದರು. ಬಸವಣ್ಣನವರ ಶಬ್ದಮಾಧುರ್ಯ, ಅಲ್ಲಮರ ಪದವಿನ್ಯಾಸ, ಚನ್ನಬಸವಣ್ಣನವರ ಭಾವವೈವಿಧ್ಯ, ಅಕ್ಕಮಹಾದೇವಿಯವರ ನಾದಸೌಂದರ್ಯ, ಸಿದ್ಧರಾಮರ ತತ್ತ್ವನೈಪುಣ್ಯ-ಇವು ಯಾವುವೂ ಸಿದ್ಧಲಿಂಗರ ವಚನವ್ಯೂಹದಲ್ಲಿ ಗೋಚರಿಸುವುದಿಲ್ಲ. ಆದರೆ ಅವರ ವಚನಗಳಲ್ಲಿ ಪದಗಾಂಭೀರ್ಯವಿದೆ, ಶಬ್ದಗುಣವಿದೆ, ಅರ್ಥಪ್ರಾಮಾಣ್ಯವಿದೆ, ಕಲಾಸೌಂದರ್ಯವಿದೆ, ನಾದವೈಶಿಷ್ಟ್ಯ ವಿದೆ. ಸಿದ್ಧಲಿಂಗರ ವಚನಗಳು ಸರಳವಾಗಿರುವಂತೆಯೇ ಕೆಲವು ತೊಡಕಾಗಿರುವುದೂ ಉಂಟು. ಇವು ಬೆಡಗಿನ ವಚನಗಳು. ಅಲ್ಲಮರೂ, ಅನೇಕ ಪ್ರಾಚೀನ ಶರಣರೂ ಇಂಥ ಹಲವಾರು

ವಚನಗಳನ್ನು ಬರೆದಿದ್ದಾರೆ. ಸಿದ್ಧಲಿಂಗರ ಬೆಡಗಿನ ವಚನಗಳ ನುಡಿಗಟ್ಟು ಕಗ್ಗಂಟಲ್ಲ; ಅವುಗಳನ್ನು ಬಿಚ್ಚಲು ಸುಲಭ; ಕಟ್ಟಲು ಸರಳ. ಅವರ ಒಂದೊಂದು ಎಳೆಯೂ ಕತ್ತಾಳೆಯ ನಾರಿನಂತೆ ಒರಟಲ್ಲ; ರೇಷ್ಮೆಯ ಎಳೆಯಂತೆ ನಯ. "ಸಟ್ಟುಗ ಸವಿಯ ಬಲ್ಲುದೆ? ಅಟ್ಟ ಮಡಕೆಯು ಉಣಬಲ್ಲುದೆ? ಬಟ್ಟಬಯಲು ಕಟ್ಟುಕುಟ್ಟಿಗೆ ಒಳಗಾಗಬಲ್ಲುದೆ? ನೀರ ಮೂಟೆಯ ಕಟ್ಟಿ ಬಯಲಿಗೆ ಬಲೆ ಬೀಸಬಹುದೆ? ಉರಿಗೆ ಅರಗ ತೋರಿ ಗಾಳಿಗೆ ಸೊಡರ ಹಿಡಿಯಬಹುದೆ? ಮಳಲ ಗೋಡೆಯನಿಕ್ಕಿ ಮಂಜಿನ ಮನೆಯ ಮಾಡಿದರೆ ಸ್ಥಿರವಾಗಬಲ್ಲುದೆ? ಕುರುಡಂಗೆ ಕನ್ನಡಿಯ ತೋರಿದರೆ ನೋಡಬಲ್ಲನೆ? ಮೂಗಂಗೆ ರಾಗವ ಹೇಳಿದರೆ ಹಾಡ ಬಲ್ಲನೆ? ಕೆರೆ ಒಡೆದ ಬಳಿಕ ತೂಬು ಒಡೆಯಬಲ್ಲುದೆ? ಒಡೆದ ಮಡಕೆಗೆ ಒತ್ತ ಮಣ್ಣ ಕೊಟ್ಟರೆ ನಿಲ್ಲಬಲ್ಲುದೆ? ಮುತ್ತು ಒಡೆದರೆ ಹತ್ತಬಲ್ಲುದೆ? ಗರ್ಭದೊಳಗಣ ಶಿಶುವಿಂಗೆ ತಾಯಿ ಉಂಡಲ್ಲಿಯೇ ಪರಿಣಾಮವಲ್ಲದೆ ಬೇರೊಂದು ಎಡೆಮಾಡಿ ಉಣ್ಣೆಂದರೆ ಉಣ್ಣ ಬಲ್ಲುದೇ? ಮಳೆ ಹೊಯ್ದರೆ ಆಕಾಶ ನೆನೆವುದೇ? ಬಿರುಗಾಳಿ ಬೀಸಿದರೆ ಆಕಾಶ ಅಲುಗುವುದೇ? ಕಿತ್ತಲಗಿನಿಂದ ಇರಿದರೆ ಆಕಾಶ ಹರಿವುದೇ?"—ಇಂಥ ಚೆಲುವು ನುಡಿಗಟ್ಟು ಸಿದ್ಧಲಿಂಗರ ವಚನ ಗಳಲ್ಲಿ ಸಾಹಿತ್ಯಕಿರಣಗಳಂತೆ ಕಂಗೊಳಿಸುತ್ತವೆ. ಇವರ ನುಡಿಗಟ್ಟು ಬ್ರಹ್ಮಗ್ರಂಥಿಯೂ ಹೌದು! ಬ್ರಹ್ಮಗಂಟು ಎಂದರೆ ಶಾಸ್ತ್ರೀಯ ರೀತಿಯಲ್ಲಿ ಹಾಕಿದ ಗಂಟು. ಅದನ್ನು ಬಿಚ್ಚಲು ತಂತ್ರಜ್ಞರಾಗಬೇಕು.

"ಹರಿಯ ಕೈಯೊಳಗಿನ ಗಿಣಿಗೆ ಬೆಕ್ಕಿನ ಭಯ. ಗಿಣಿ ಎದ್ದೋಡಿ ಹಾಲ ಕುಡಿಯಲು ಹರಿಯ ಕೈ ಮುರಿದು ಮಾರ್ಜಾ ಲಗೆ ಮರಣವಾಯಿತ್ತು ನೋಡಾ, ಮಹಾಲಿಂಗ ಗುರು ಶಿವ

ಸಿದ್ಧೇಶ್ವರ ಪ್ರಭುವೇ" ಇದೊಂದು ಅವರು ಹಾಕಿದ ಬ್ರಹ್ಮ ಗಂಟು. ಇಲ್ಲಿ ಹರಿ ಎಂದರೆ ಚಂಚಲ ಮನಸ್ಸು ಎಂಬ ಕಪಿ; ಜೀವಾತ್ಮ ಎಂಬ ಗಿಣಿ; ಮಾಯೆಯೇ ಬೆಕ್ಕು. ಈ ಬೆಕ್ಕಿನಿಂದ ಜನನ–ಮರಣಗಳೆಂಬ ಭಯ. ಹಾಲ ಕುಡಿಯಲು ಎಂದರೆ ಸದ್ಗುರುಪದೇಶವೆಂಬ ಅಮೃತಪಾನಮಾಡಲು ಜೀವನು ತವಕಿಸಿದರೆ ಆ ಬೆಕ್ಕು ಸತ್ತುಹೋಯಿತ್ತು; ಆ ಹರಿಯ ಕೈಮುರಿದು ಹೋಯಿತ್ತು" ಎಂಬುದು ಇದರ ಭಾವಾರ್ಥ.

"ಮಾಳಿಗೆಯ ಮನೆಯ ಕಾಳಿಕೆಯೊಳಗೆ ಹೊಳಿದ್ದ ವಸ್ತು ಇದೇನಯ್ಯ; ಮಾಳಿಗೆ ಬಯಲಾಗಿ ಕಾಳಿಕೆ ಅಳಿದಲ್ಲದೆ ಹೊಳಿದ್ದ ವಸ್ತು ಕಾಣಲಾರಳವಲ್ಲ ಕಾಣಾ, ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ"––ಇದೊಂದು ಅವರ ತತ್ತ್ವಬ್ರಹ್ಮ ಗ್ರಂಥಿ. ಮೇಲು ನೋಟದಲ್ಲಿ ಇದರ ರೀತಿಯೇ ಬೇರೆ. ಆದರೆ, ಇದರ ಅಂತರಾರ್ಥ ಮನನೀಯವಾಗಿದೆ. ಅಸ್ಥಿ ಚರ್ಮ ನರ ರೋಮ ಮಾಂಸಮಯ ದೇಹವೇ ಮಾಳಿಗೆಯ ಮನೆ; ಕಾಳಿಕೆ ಎಂದರೆ ಅಜ್ಞಾನ; ಹೊಳಿದ್ದ ವಸ್ತು ಎಂದರೆ ಅಡಗಿರುವ ಪರವಸ್ತು. ಶಿವಜ್ಞಾನ ಜ್ಯೋತಿಯಿಂದ ದೇಹಭಾವವನ್ನು ಹೋಗಲಾಡಿಸುವುದೇ ಮಾಳಿಗೆಯ ಮನೆ ಬಯಲಾಗುವುದು ಎಂಬುದರ ಅರ್ಥ. ಇನ್ನೊಂದು ಬೆಡಗಿನ ವಚನವನ್ನು ಪರಿಶೀಲಿಸೋಣ, ಅಲ್ಲಿಗೆ ಸಾಕು.

"ಮನಸಿನ ಸಂಶಯ ಕನಸಿನ ಭೂತವಾಗಿ ಕಾಡುವುದು ನೋಡಾ. ಮನಸಿನ ಸಂಶಯವಳಿದರೆ ಕನಸಿನ ಕಾಟ ಬಿಟ್ಟೋಡಿತ್ತು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ." ಇದರಲ್ಲಿ ಶಿವೋಽಹಂ ತತ್ತ್ವವನ್ನು ನಿರೂಪಿಸಿದ್ದಾರೆ. ನಾನು ಶಿವನು ಅಹುದೋ ಅಲ್ಲವೋ ಎಂಬುದೇ ಮನಸ್ಸಿನ ಸಂಶಯ.

ನಾನು ಮನುಷ್ಯನೆಂದು ತಿಳಿಯುವ ಮಿಥ್ಯಾಸ್ವರೂಪದ ಅಜ್ಞಾನ ಕನಸಿನ ಭೂತ ಇದು ಮನುಷ್ಯನನ್ನು ಕಾಡಿಸುತ್ತದೆ ಎಂದರೆ ಭವಭಯವನ್ನು ಉಂಟುಮಾಡುತ್ತದೆ. ನಾನು ಶಿವನೆಂಬ ಜ್ಞಾನವೇ ಚಿತ್‌ಸೂರ್ಯ. ಇದು ಉದಯವಾದರೆ ಅಜ್ಞಾನ ಎಂಬ ಕತ್ತಲೆ ಹೋಗುತ್ತದೆ. ಇದು ಈ ವಚನದ ಭಾವಾರ್ಥ. ಅವರ ವಚನಗಳು ಎರಡು ಪಙ್ತಿಗಳಿಂದ ಹಿಡಿದು ಕೆಲವು ಸುಮಾರು ನೂರಾರು ಪಙ್ತಿಗಳಷ್ಟು ದೊಡ್ಡದಾಗಿರುತ್ತವೆ. ಹದಿನೈದನೆಯ ಶತಮಾನ ಸಾಹಿತ್ಯ ದೃಷ್ಟಿಯಿಂದ ಸೃಷ್ಟಿಯ ಯುಗವಾಗಿರಲಿಲ್ಲ. ಅದು ಧಾರ್ಮಿಕ ವಿಚಾರಯುಗವಾಗಿತ್ತು. ಅವರ ಕಾಲದ ಮಹಾಂತರು ಪಂಡಿತವರ್ಯರಾಗಿದ್ದರು; ತತ್ತ್ವಜ್ಞರಾಗಿದ್ದರು. ಕೆಲವರು ಕವಿವರ್ಯರಾಗಿದ್ದರು. ಆದ್ದರಿಂದ ಸಿದ್ಧಲಿಂಗರ ಕಾಲದ ವಚನಗಳಲ್ಲಿ ವೀರಶೈವ ಸಿದ್ಧಾಂತ ತತ್ತ್ವ ನಿರೂಪಣೆಯೇ ಪ್ರಧಾನವಾಯಿತು. ಅವರ ವಚನಗಳು ತುಂಬ ದೊಡ್ಡವೂ ಆದವು. ಅವುಗಳಲ್ಲಿ ಭಾವತೀವ್ರತೆಯಾಗಲಿ, ಹೃದಯಸೌಂದರ್ಯವಾಗಲಿ, ಪುರಾತನ ಶರಣರ ವಚನಗಳಲ್ಲಿ ಕಂಡಷ್ಟು ಪೂರ್ಣರೂಪದಿಂದ ಕಾಣುತ್ತಿಲ್ಲ. ಆದರೆ ಸಿದ್ಧಲಿಂಗರ ಕಾಲದ ಅನೇಕ ವಚನಗಳು ಉತ್ತಮ ಭಾವಗೀತೆಗಳಂತಿವೆ; ರಸದಾಳಿಕಬ್ಬಿನಂತಿವೆ ಎಂಬುದರಲ್ಲಿ ಸಂಶಯವಿಲ್ಲ. ಇವುಗಳಲ್ಲಿ ವಿಡಂಬನೆ ಇದೆ; ಮೊರೆ ಇದೆ ; ಹಂಬಲವಿದೆ ; ಆತ್ಮಪರೀಕ್ಷೆ ಇದೆ; ಅಂತರಂಗದರ್ಶನವಿದೆ. ಅವರು ಲೋಕದ ಸ್ತುತಿನಿಂದೆಗಳಿಗೆ ಮನಗೊಡಲಿಲ್ಲ. ಯಾರೇ ಸ್ತುತಿಸಲಿ, ಯಾರೇ ನಿಂದಿಸಲಿ ಮನುಷ್ಯ ಹಿಗ್ಗಬಾರದು; ಕುಗ್ಗಬಾರದು. "ಕಂಡೊಂದ ನುಡಿವುದೀ ಲೋಕ, ಕಾಣದೊಂದ ನುಡಿವುದೀ ಲೋಕ, ಹಿಂದೆ ನಿಂದಿಸಿದರೆಂದು ಕುಂದಲಿಲ್ಲ; ಮುಂದೆ ವಂದಿಸಿದರೆಂದು ಉಬ್ಬ

ಲಿಲ್ಲ. ವಂದನೆ ನಿಂದನೆಯೆಂಬುದು ಉಪಜೀವಿಗಳಿಗಲ್ಲದೆ ಉಪಮಾತೀತನಾದ ಪ್ರಾಣಲಿಂಗೈಕ್ಯ ನಿಮಗುಂಟೇ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ'' ಎಂಬ ವಚನದಲ್ಲಿ ಅವರ ಸಹಜ ಜೀವನದರ್ಶನವಿದೆ. ಈ ವಿರತ ಹೃದಯ ಗಂಗಾ ಮೂಲದಲ್ಲಿ 'ವಚನ' ದೇವಗಂಗೆ ಉದಯಿಸಿ ಲೋಕ ಸಂಪೂಜ್ಯೆಯಾದಳು. ಸಿದ್ಧಲಿಂಗರು ಸನಾತನ ವೀರಶೈವ ಧರ್ಮಾಮೃತವನ್ನು ಪಾನಮಾಡಿ, ನಿತ್ಯನಿರಂಜನಸಿದ್ಧರಾದರು.

೧೦

ಸಿದ್ಧಲಿಂಗರು ಅತಿ ಸೂಕ್ಷ್ಮ ಸಾಹಿತ್ಯ ವಿಮರ್ಶಕರು. ಅವರು ಶೈವ, ವೈಷ್ಣವ, ಜೈನ ಸಂಪ್ರದಾಯಗಳನ್ನು ಟೀಕಿಸಿರಬಹುದು. ಅಂದಿಗೆ ಅದು ಬೇಕಾದರೆ, ಇಂದಿಗೆ ಅದು ಸಲ್ಲದು. ಸಾಹಿತ್ಯದ ಆನಂದಕ್ಕಿಂತಲೂ ಆಧ್ಯಾತ್ಮಿಕಾನಂದ ನಿತ್ಯವಾದುದು. ಅವರು ಅಂಥ ನಿತ್ಯಾನಂದವನ್ನು ಸಾಹಿತ್ಯದಲ್ಲಿ ಕಂಡು ಕೃತಾರ್ಥರಾದರು. ವಚನ ಸಾಹಿತ್ಯ ಕವಿಕರ್ಮವಲ್ಲ ; ಶಾಸ್ತ್ರತೀರ್ಥವಲ್ಲ ; ಅದು ಅನುಭಾವಿಯ ಪರಮಾನಂದ ಸುಧಾತರಂಗಿಣಿ ; ಸಿದ್ಧಲಿಂಗರ ಶಿವಯೋಗ ಸಮಾಧಿ ನಾಗಿಣೀ ನದಿಯ ತೀರದಲ್ಲಿದೆ. ಆ ನಾಗಿಣೀ ನದಿ ಪರಮಾನಂದ ಸುಧಾತರಂಗಿಣಿಯಾಯಿತು ! ಆ ಸಮಾಧಿ ಎಡೆಯೂರು ಕ್ಷೇತ್ರದಲ್ಲಿ ಇಂದಿಗೂ ಕಂಗೊಳಿಸುತ್ತಿದೆ. ಆ ಪುಣ್ಯಕ್ಷೇತ್ರವೇ ಆ ಶಿವಯೋಗಿಯ ಸಿದ್ಧಚೇತನಕ್ಕಿಟ್ಟ ನೈವೇದ್ಯ, ಎಡೆ! ಅದರಿಂದಲೇ ಎಡೆಯೂರು ಎಂಬ ಹೆಸರು ಅನ್ವರ್ಥವಾಯಿತು. ಆ ಕ್ಷೇತ್ರದ ಮಣ್ಣು, ನೀರು, ಗಾಳಿ, ಬೆಂಕಿ, ಬಾನು...ಇವು ಒಂದೊಂದೂ ಚೈತನ್ಯಮಯ ! ಅಲ್ಲಿ ಪ್ರಕೃತಿಸೌಂದರ್ಯ ತುಂಬಿದೆ. ತುಂಗಾ ತೀರದಲ್ಲಿ ಶೃಂಗೇರಿ ;

ಭದ್ರಾತೀರದಲ್ಲಿ ಜೈನ ಕ್ಷೇತ್ರ ಸಿಂಗನಗದ್ದೆ ; ತುಂಗಭದ್ರಾ ತೀರದಲ್ಲಿ ಮಂತ್ರಾಲಯ; ಕಾವೇರಿಯ ತೀರದಲ್ಲಿ ಆದಿಶ್ರೀರಂಗ ; ಕೃಷ್ಣಾ–ಮಲಪ್ರಭಾ ಸಂಗಮದಲ್ಲಿ ಕೂಡಲಸಂಗಮ ; ಕಪಿಲಾ ತೀರದಲ್ಲಿ ನಂಜನಗೂಡು, ನಾಗಿಣೀ ನದಿಯ ತೀರದಲ್ಲಿ ಎಡೆಯೂರು—ಈ ಏಳೂ ಕನ್ನಡ ನಾಡಿನ ಉಜ್ವಲ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಪರಂಧಾಮಗಳಾಗಿವೆ ; ಸಪ್ತ ಪುಣ್ಯ ಕ್ಷೇತ್ರಗಳಾಗಿವೆ, ಸಪ್ತಋಷಿಮಂಡಲ ಸ್ವರೂಪವಾಗಿವೆ. ಸಿದ್ಧಲಿಂಗರ ಸಾಹಿತ್ಯದಲ್ಲಿ ಸಿದ್ಧಾತ್ಮ ಲಕ್ಷಣಗಳಿವೆ. ಆತ್ಮ ತತ್ತ್ವ ಚಿಂತನೆ, ಸರ್ವಪ್ರಾಣಿದಯಾಪರತೆ, ವೈರಾಗ್ಯಮನೋಭಾವ— ಇವು ಆ ಯುಗದ ಸಾಹಿತ್ಯದಿಂದ ಲಭಿಸುತ್ತವೆ. ಅವರ ಸಾಹಿತ್ಯದಲ್ಲಿ ಅರಿಷಡ್ವರ್ಗಗಳ ಉಪಟಳವಿಲ್ಲ. ಅದು ಆತ್ಮಾನಂದ ಸ್ಥಿತಿಯನ್ನು ಅಭಿವ್ಯಕ್ತಗೊಳಿಸುತ್ತದೆ. ಅವರ ಕಲ್ಪನಾಕಾಶದಲ್ಲಿ ಸುಳಿಯದ ಲೋಕಾನುಭವ ಸ್ವರೂಪಗಳಿಲ್ಲ ; ಗೋಚರಿಸದ ಆತ್ಮಾನಂದ ತರಂಗಗಳಿಲ್ಲ. ಅವರು ಅಂದಿನ ಶಿವ ಧರ್ಮ ಸಾಹಿತ್ಯದೇವಿಯ ಪಂಚಪ್ರಾಣಲಿಂಗ ಸ್ವರೂಪವಾಗಿರುವಂತೆಯೇ ವಿರತ ಸಾಹಿತ್ಯ ಮಹಾಮಣಿ ಮಂಟಪದ ಮೇಲೆ ಕಂಗೊಳಿಸುವ ಆತ್ಮಲಿಂಗ ಕಲಶವೂ ಆಗಿದ್ದಾರೆ. ಅವರು ಷಟ್‌ಸ್ಥಲ ಸಾಹಿತ್ಯವನ್ನು ರೂಪಿಸುವುದರಲ್ಲಿ ವಚನಬ್ರಹ್ಮರಾಗಿರುವಂತೆಯೇ ಆ ಸಾಹಿತ್ಯಸೌಂದರ್ಯವನ್ನು ರೂಪಿಸುವುದರಲ್ಲಿ ವಚನವಿಶ್ವಕರ್ಮರೂ ಆಗಿದ್ದಾರೆ.

“ಕತ್ತಲೆಯನೊಳಗೊಂಡ ಬೆಳಗಿನಂತೆ, ಪಕ್ಷಿಯನೊಳಕೊಂಡ ತತ್ತಿಯಂತೆ, ಮುತ್ತನೊಳಕೊಂಡ ಚಿಪ್ಪಿನಂತೆ, ಸಾಗರವನೊಳಕೊಂಡ ಶಶಿಯಂತೆ, ಜಗವನೊಳಕೊಂಡ ಆಕಾಶದಂತೆ, ಎನ್ನ ನೀವು ಒಳಕೊಂಡಿರಿಯಾಗಿ ನಾನೋ ನೀನೋ ಎನೆಂದರೆ

ಯೆನಯ್ಯ" ಎಂಬ ವಚನದಲ್ಲಿ ಐಕ್ಯಸ್ಥಿತಿಯನ್ನು ಸುಂದರ ಸಾದೃಶ್ಯಗಳಿಂದ ನಿರೂಪಿಸಿದ್ದಾರೆ. "ಹೊನ್ನು ತನ್ನ ಬಣ್ಣದ ಲೇಸನು ತಾನರಿಯದಂತೆ, ಬೆಲ್ಲ ತನ್ನ ಮಧುರವ ತಾನರಿಯದಂತೆ, ಪುಷ್ಪ ತನ್ನ ಪರಿಮಳವ ತಾನರಿಯದಂತೆ, ಮನ ಮಹಾಲಿಂಗದಲ್ಲಿ ಲೀನವಾದರೆ 'ನಾನು ನೀನಾಗಿರ್ದೆನಯ್ಯ' ಎಂಬ ತತ್ತ್ವವನ್ನು ಅವರು ಚಿತ್ತಾಕರ್ಷಕವಾಗಿ ನಿರೂಪಿಸಿದ್ದಾರೆ. "ಹೊರಗೆ ಅಗ್ನಿ ಉರಿವುತಿಪ್ಪುದು; ಕುಂಭದೊಳಗೆ ಉದಕವಿಪ್ಪುದು. ಅಗ್ನಿಯ ಸಂಪರ್ಕದ ದೆಸೆಯಿಂದ ಕುಂಭದೊಳಗಿದ್ದ ಉದಕ ಉಷ್ಣವಾಗುವಂತೆ, ಸರ್ವೇಂದ್ರಿಯವನ್ನುಳ್ಳ ಪ್ರಾಣ ತನ್ನ ಪೂರ್ವಗುಣವನು ಬಿಟ್ಟು ಲಿಂಗಕಳೆಯನ್ನೇ ಪಡೆದು ಪ್ರಾಣಲಿಂಗವಾಗುವುದು" ಎಂಬ ತತ್ತ್ವವನ್ನು ಆ ಶಿವಯೋಗಿವರ್ಯರು ರೇಖಾಚಿತ್ರದಲ್ಲಿ ಮೂಡಿಸಿದ್ದಾರೆ. ಅವರ ಭಾಷೆ ಸರಳ; ಕಳಪೆಯಲ್ಲ, ನುಡಿ ಹಗುರ; ನಿಸ್ಸತ್ವವಲ್ಲ. ಪದಶ್ರೇಣಿಯಲ್ಲಿ ಅಲಂಕಾರವಿದೆ; ಆದರೆ ಅಲಂಕಾರಭಾವವಿಲ್ಲ. ಅವರು ಹಿಂದಣ ಸನಾತನ ಆಗಮ ವೀರಶೈವ ಮತ್ತು ಪುರಾತನ ಶೈವಗಳ ಸತ್ವವನ್ನು, ಶರಣ ಧರ್ಮ ತತ್ತ್ವಾರ್ಥ ನವನೀತದಲ್ಲಿ ಪರಿಪಕ್ವಗೊಳಿಸಿ 'ವಚನಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್" ಎಂಬಂತೆ ವಿಶ್ವದಾಸೋಹವನ್ನು ನಡೆಸಿದರು.

ಮಾನವ ದೇವನಾಗಲು ಸಾಧನೆ ಬೇಕು. ಎಲ್ಲಕ್ಕಿಂತಲೂ ಮಿಗಿಲೆನಿಸಿ ಮಾನವ ಶೀಲಸಂಪನ್ನನಾಗಬೇಕು. ಶೀಲವಿಲ್ಲದ ಮೇಲೆ ಏನಿದ್ದರೂ ವ್ಯರ್ಥ. ಈ ಉತ್ತಮ ನೀತಿಯನ್ನು ಅವರು ತಮ್ಮ ವಚನವಾಣಿಯಲ್ಲಿ ಹೇಳಿದರು. ಶೀಲವಿಲ್ಲದವರು ಪಂಡಿತರಾದರೇನು? ಘನಪಾಠಿಗಳಾದರೇನು? ಗುರುವಾದರೇನು? ವಿರಕ್ತನಾದರೇನು? ಶ್ರೀಮಂತನಾದರೇನು? ಸಾರ್ವಭೌಮ

ನಾದರೇನು? ಯೋಗಿಯಾದರೇನು? ಭೋಗಿಯಾದರೇನು? ಕಾವಿಯನ್ನು ಉಟ್ಟರೇನು? ಕಂಕಣವನ್ನು ಧರಿಸಿದರೇನು? ಶೀಲವೇ ಭೂಷಣ. ಶೀಲವಿಲ್ಲದ ಪದವಿ ಪ್ರತಿಷ್ಠೆಗಳೆಲ್ಲಾ ಡೊಂಬರಾಟದಂತೆ ಕ್ಷಣ ಮನೋರಂಜನೆಯಾಗುತ್ತವೆ. ಶೀಲ ದಿಂದಲೇ ಇಹದಲ್ಲಿ ಸುಖ; ಪರದಲ್ಲಿ ಆನಂದ. ಶೀಲದಿಂದ ಮಾನವ ಸಂಪೂಜ್ಯನಾಗುತ್ತಾನೆ. "ಚಿಲುಮೆಯ ಅಗ್ಗಣಿಯು ಮಿಂದರೇನು? ಜನ್ಮದ ಮೈಲಿಗೆಯ ಕಳೆಯದನ್ನಕ್ಕರ? ಉಳ್ಳಿ ನುಗ್ಗಿಯ ಬಿಟ್ಟರೇನು? ಸಂಸಾರದ ಸೊಕ್ಕಿನುಕ್ಕನು ಮುರಿಯದ ನ್ನಕ್ಕರ? ಪರಿಮಳಾದಿಗಳ ಬಿಟ್ಟರೇನೋ ಮಾಯಾ ದುರ್ವಾ ಸನೆಯ ವಿಸರ್ಜಿಸದನ್ನಕ್ಕರ? ಸಪ್ಪೆಯನುಂಡರೇನೋ ಸ್ತ್ರೀಯರ ಅಪ್ಪುಗೆಯ ಬಿಡದನ್ನಕ್ಕರ?" ಎಂದು ಸಿದ್ಧಲಿಂಗರು ಮಾನವರ ಗುಣಶೀಲ ಸ್ವಭಾವಗಳು ನಿರ್ಮಲವಾಗಿರಬೇಕೆಂದು ಬೋಧಿಸಿ ದರು.

ಸಂಸ್ಕಾರವಿಲ್ಲದ ಮನುಷ್ಯ ಕಾಡುಮೃಗದಂತೆ ಅಪಾಯಕರ; ಬಾಳೆಯಕಾಯಿ ಹಣ್ಣಾದರೆ ಅದನ್ನು ದೇವರಿಗೆ ಅರ್ಪಿಸುತ್ತಾರೆ; ಮುತ್ತೈದೆಯರಿಗೆ ಮಡಿಲು ತುಂಬುತ್ತಾರೆ. ಕಾಯಿ ದೇವರಿಗೆ ಅರ್ಪಣೆಯಾಗುವುದಿಲ್ಲ; ಮುತ್ತೈದೆಯ ಮಡಿಲಿಗೆ ಯೋಗ್ಯ ವಾಗುವುದಿಲ್ಲ; ಅದು ಹಣ್ಣಾದರೆ ಅದರ ಜನ್ಮ ಸಾರ್ಥಕ. ಅದು ಹಣ್ಣಾಗಲು ಅದಕ್ಕೆ ಸಂಸ್ಕಾರಬೇಕು. ಅದು ಗುಡಾಣದಲ್ಲಿ ಹುಲ್ಲು ಸೊಪ್ಪಿನ ಶಾಖದಲ್ಲಿ ಮೃದುವಾಗುತ್ತದೆ. ಗಿಡದಲ್ಲಿಯೇ ಹಣ್ಣಾಗುವ ಭಾಗ್ಯ ಲಭಿಸುವುದು ಅಪೂರ್ವ! ಹಾಗಾಗುವುದು ಒಂದು ಸಂಸ್ಕಾರ ವಿಶೇಷ! ಸುಕೃತಫಲದಿಂದ ಮನುಷ್ಯನಿಗೆ ಅಂಥ ವಿಶೇಷ ಸಂಸ್ಕಾರ ಲಭಿಸುತ್ತದೆ. ಸಾಮಾನ್ಯ ಜನರಿಗೆ ಶಾಸ್ತ್ರಜ್ಞಾನ, ನೀತಿಬೋಧೆ, ಗುರುಕೃಪೆ, ದೇವತಾಪೂಜೆ,

ಧ್ಯಾನ, ಅಧ್ಯಯನ ಮೊದಲಾದುವುಗಳಿಂದ ಸಂಸ್ಕಾರ ಲಭಿಸುತ್ತದೆ. ಅಂಥವರು ಸುಸಂಸ್ಕೃತರು. ಅವರಿಂದ ಸಮಾಜಜೀವನ ಸುಧಾರಿಸುತ್ತದೆ. ಅವರಿಗೆ ಬೋಧಿಸಿದ ಉಪದೇಶ ಫಲಿಸುತ್ತದೆ. ಅಂಥವರ ಸಹವಾಸದಿಂದ ಅಸಂಸ್ಕೃತರೂ ಸುಸಂಸ್ಕೃತರಾಗುತ್ತಾರೆಂಬ ಲೋಕಾನುಭವವನ್ನು ಸಿದ್ಧಲಿಂಗರು ಪಡೆದಿದ್ದರು. ''ಜೇನುತುಪ್ಪದಲ್ಲಿ ಬಿದ್ದು ಸಾವ ನೊಣದಂತೆ, ಕೀಳು ಮಾಂಸದ ಸವಿಗೆ ಗಂಟಲ ಗಾಣದಲ್ಲಿ ಸಿಕ್ಕಿ ಸಾವ ಮೀನಿನಂತೆ, ಹೀನ ವಿಷಯವ ನಚ್ಚಿ ಮೆಚ್ಚದಿರಾ ಎಲೆ ಹುಚ್ಚುಮನವೇ'' ಎಂಬಂತೆ ವಿಷಯಾಸಕ್ತರಾಗದೆ ಅವರು ಮನೋನಿಗ್ರಹವನ್ನು ಸಾಧಿಸಿದ್ದರು. ''ಬೂದಿಯಲ್ಲಿ ಹೊರಳುವ ಕತ್ತೆಯಂತೆ ಎಲುವ ಕಡಿವ ಶ್ವಾನನಂತೆ ಹಾತೆಯ ತಿಂಬ ಹಲ್ಲಿಯಂತೆ'' ಮನುಷ್ಯ ಇಂದ್ರಿಯ ಚಾಪಲ್ಯಕ್ಕೆ ಸಿಕ್ಕಿ ಅಧೋಗತಿಗೆ ಇಳಿಯಬಾರದೆಂದು ಅವರು ಲೋಕವನ್ನು ಎಚ್ಚರಿಸಿದರು. ಶಿವಜ್ಞಾನಸಂಪನ್ನನಾಗದ ಮಾನವನಿಗೆ ಏನಿದ್ದರೇನು? ಅವನಿಗೆ ಯಾವ ಬೋಧೆಯೂ ಹಿಡಿಯುವುದಿಲ್ಲ. ''ಕತ್ತೆಗೇಕಯ್ಯ ಕಡಿವಾಣ; ಕೊತ್ತಿಗೇಕಯ್ಯ ತೋಳಬಂದಿ; ಶ್ವಾನಗೇಕೆ ಆನೆಯ ಚೋಹವಯ್ಯ? ಹಂದಿಗೇಕೆ ಚಂದ್ರಾಯುಧವಯ್ಯ?'' ಎಂಬಂತೆ ಶಿವಧರ್ಮನಿಷ್ಠೆ ಇಲ್ಲದವನಿಗೆ ಆತ್ಮತತ್ತ್ವ ರುಚಿಸುವುದಿಲ್ಲ ಎಂದು ಅವರು ನಿಷ್ಠೂರವಾಗಿಯೇ ಹೇಳಿದರು. ಪರಸ್ತ್ರೀಯರ ಕೂಟದಿಂದ ಪಂಚಮಹಾಪಾತಕ ದೋಷ ತಟ್ಟುತ್ತದೆ. ಪರಸ್ತ್ರೀಲೋಲುಪನಿಗೆ ಸನ್ಮಾರ್ಗ ಗೋಚರಿಸುವುದಿಲ್ಲ ಎಂಬ ಪರಮೋತ್ತಮ ನೀತಿಯನ್ನು ಅವರು ಪ್ರತಿಪಾದಿಸಿದರು. ''ಅಮೇಧ್ಯವ ಭುಂಜಿಸುವ ಸೂಕರ ಅಮೃತದ ಸವಿಯ ನೆತ್ತ ಬಲ್ಲುದಯ್ಯ? ಅಂಗನೆಯ ಸಮ್ಮೇಳನದ ವಿಕಾರದ ಭಂಗಿಯ ಕೊಂಡು ಮೈಮರೆದ ಮನು

ಜರು ಶಿವಪ್ರೇಮ ಸುಖವನೆತ್ತಬಲ್ಲರು''—ಎಂದು ಅವರು ಕಟುವಾಗಿಯೇ ಲೋಕವನ್ನು ಟೀಕಿಸಿದರು ಒಮ್ಮೊಮ್ಮೆ ''ಗಾಳಿ ಬೀಸುವನ್ನಕ್ಕರ ಪರನುಲಿಯದೆ ಮಾಣದಯ್ಯ. ಕಾಯವುಳ್ಳನ್ನಕ್ಕರ ವಿಕಾರ ಸಾಯದು ನೋಡಾ! ಭಾವವುಳ್ಳನ್ನಕ್ಕರ ಮಾಯೆ ಮಾಣದಯ್ಯ. ಮಾಯವುಳ್ಳನ್ನಕ್ಕರ ಸಾವು ಮಾಣ'' ದೆಂದು ಅವರು ಸತ್ಯದರ್ಶನ ಮಾಡಿಸಿದರು. ಕಾಯ, ಭಾವ, ಮನ-ಇವು ಮೂರೂ ಶುದ್ಧವಿರಬೇಕೆಂಬ ಅರಿವನ್ನು ಅವರು ಜನಜೀವನದಲ್ಲಿ ಮೂಡಿಸಿದರು. ಇದು ನಿತ್ಯಜೀವನದ ಚಿತ್ರಾರದಂತಿದೆ. ಅವರ ವಚನಗಳಲ್ಲಿ ತತ್ತ್ವ ನಿರೂಪಣೆಯಿದೆ; ಯೋಗ ಸ್ವರೂಪವಿದೆ. ಬಸವಣ್ಣನವರೇ ಮೊದಲಾದ ಹಿಂದಿನ ಶರಣರ ವಚನಸಾಹಿತ್ಯ ವಾಹಿನಿ ಗಂಗಾಸ್ನಾನದಂತೆ ಹಿತವಾದರೆ, ಸಿದ್ಧಲಿಂಗರೇ ಮೊದಲಾದ ವಿರತರ ವಚನಸಾಹಿತ್ಯ ವಾಹಿನಿ ತುಂಗಾಪಾನದಂತೆ ಹಿತಕರವಾಗಿದೆ.

೧೧

ಸಿದ್ಧಲಿಂಗರ ವ್ಯಕ್ತಿತ್ವ ನಮ್ಮ ಹೃದಯದಲ್ಲಿ ನಮ್ಮ ನಮ್ಮ ಸಂಸ್ಕೃತಿಯ ಮಟ್ಟದ ಮೇಲೆ ಮೂಡುತ್ತದೆ. ಅವರು ಮಾನವರಾಗಿಯೇ ಜನಿಸಿದರು; ಮಾನವ ಸಮಾಜ ಜೀವನದಲ್ಲಿ ಬದುಕಿದರು. ಆದರೆ, ಅವರು ತಮ್ಮ ಬದುಕಿನಿಂದ ಕಾರಣ ಪುರುಷರಾದರು; ಮಾನವ ಜೀವನದಲ್ಲಿ ದೇವ ಜೀವನವನ್ನು ರೂಢಿಸಿಕೊಂಡರು. ಅವರ ವ್ಯಕ್ತಿತ್ವ ಮಹೋನ್ನತವಾಯಿತು. ಅವರು ತಮ್ಮ ಬದುಕಿನಿಂದ ಲೋಕದ ಬದುಕನ್ನು ದೊಡ್ಡದ ಮಾಡಿದರು; ಲೋಕದ ಬದುಕಿನಲ್ಲಿ ಶಿವಪಥವನ್ನು ತೋರಿಸಿದರು. ಅರಿಷಡ್ವರ್ಗದಿಂದ ಅವರು ಪರಿತಪಿಸಿದರೇನೋ! ಕಾಮ,

ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ—ಇವು ಆರೂ ಮಾನವನ ಆಜನ್ಮ ಶತ್ರುಗಳು. ಇವುಗಳಲ್ಲಿ ಒಂದೊಂದೇ ಸಾಕು! ಅದು ಮಾನವನನ್ನು ನಡುಗಿಸಿ, ದಾರಿತಪ್ಪಿಸಿ, ಅಧೋಗತಿಗೆ ತಳ್ಳುತ್ತದೆ. ಈ ಶತ್ರುಪರಂಪರೆಯನ್ನು ಜಯಿಸಲು ಅಸಾಧಾರಣ ಆತ್ಮಸಂಯಮ ಬೇಕು. "ಎನ್ನ ಮನಸ್ಸು ಹೊನ್ನು ಹೆಣ್ಣು ಮಣ್ಣು ನೆನೆದು ಭ್ರಮೆಗೊಂಡು ನಿಮ್ಮ ನೆನೆಯಲೊಲ್ಲದು ನೋಡಾ! ಎನ್ನ ಕಾಯ ನಿಮ್ಮ ಮುಟ್ಟದೆ ಸಂಸಾರ ಕರ್ಮವನೆ ಮಾಡುತಿರ್ಪುದು ನೋಡಾ! ಎನ್ನ ಪ್ರಾಣ ನಿಮ್ಮ ಮುಟ್ಟದೆ ಪ್ರಪಂಚಿನೊಳಗೆ ಮುಳುಗುತಿಪ್ಪುದು ನೋಡಾ! ಎನ್ನ ಭಾವ ನಿಮ್ಮ ಭಾವಿಸಿ ಭ್ರಮೆಯಳಿಯದೆ ಸಂಸಾರ ಭಾವನೆ ಸಂಬಂಧವಾಗಿ ಮುಂದುಗಾಣದೆ ಮುಮುಕ್ಷುಹೀನನಾಗಿದ್ದೆನಯ್ಯ. ಸುರಚಾಪದಂತೆ ತೋರಿ ಅಡಗುವ ಅನಿತ್ಯವನ್ನು ನಿತ್ಯವೆಂದು ನಿರುತವೆಂದು ವೃಥಾ ಹೋಯಿತ್ತು ಎನ್ನ ವಿವೇಕ. ಸಂಸಾರದಲ್ಲಿ ಸವೆಸವೆದು ಅವಿವೇಕಿಯಾದೆನಯ್ಯಾ, ಎನ್ನ ಅವಿವೇಕವ ಕಳೆದು ಶಿವತತ್ತ್ವ ವಿವೇಕವನಿತ್ತು ಕರುಣಿಸಯ್ಯ" ಎಂದು ಅವರು ಪರಮಾತ್ಮನನ್ನು ಅಂಗಲಾಚಿ ಬೇಡಿಕೊಂಡಿದ್ದಾರೆ. ಮನಸ್ಸಿನ ಹೊಯ್ದಾಟವನ್ನು ನಿಗ್ರಹಿಸಲು ಅವರು ಸಾಧಕ ಸ್ಥಿತಿಯಲ್ಲಿ ಪರಮಾತ್ಮನಿಗೆ ಮೊರೆಯಿಟ್ಟಿದ್ದಾರೆ. ಇದು ಅವರ ನಿರಭ್ರ ಶುಭ್ರ ಹೃದಯಾಕಾಶ ಪೂರ್ವಪರಿಚಯ! ಅವರಲ್ಲಿ ಆತ್ಮ ಸಂಯಮ ಬಲದಿಂದ ಜೀವಭಾವ ಅಳಿಯಿತ್ತು, ಮಾಯಾನಿರಸನವಾಯಿತ್ತು; ಯೋಗಸಿದ್ಧರಾದರು. "ತನ್ನಿಂದನ್ಯವಾಗಿ ಇನ್ನೇನೂ ಇಲ್ಲ. ಅನ್ಯ ಅನನ್ಯವೆಂಬುದಳಿದು ಅದ್ವೈತ ಪರವಸ್ತುವಾದೆನು ಕಣಾ" ಎಂದು ಅವರು ನುಡಿದಿದ್ದಾರೆ. ಅವರು ಲೋಕ ಸಂಪೂಜ್ಯರಾದರು. ಅವರ ಆಧ್ಯಾತ್ಮಿಕ ಪ್ರಭಾವದಿಂದ ಬಿಜ್ಜವರ,

ಕಳಲೆ, ಹದಿನಾಡು, ಕಾವೇರಿ–ಹೇಮಾವತೀ ನದಿಗಳ ನಡು ವಿನ ನಾಡುಗಳ ಪ್ರಭುಗಳು ಸಿದ್ಧಲಿಂಗರ ಪರಮಶಿಷ್ಯರಾದರು. ನಿಜಗುಣರ ಕಾಲ ಸುಮಾರು ೧೫೦೦. ಅವರು ೧೬ನೆಯ ಶತಮಾನದಲ್ಲಿದ್ದರೆಂಬುದು ವಿಶ್ವಾಸಾರ್ಹವಾಗಿಲ್ಲ. ನಿಜಗುಣರು ಕೊಳ್ಳೇಗಾಲ ಪ್ರಾಂತದ ಪ್ರಭುಪದವಿಯನ್ನು ತ್ಯಜಿಸಿ, ಸಿದ್ಧ ಲಿಂಗರ ತಪಃಪ್ರಭಾವದಿಂದ ವೈರಾಗ್ಯಜೀವನವನ್ನು ಅವಲಂಬಿ ಸಿದರೆಂದು ತರ್ಕಿಸಲು ಸಾಕಾದಷ್ಟು ಪ್ರಮಾಣಗಳಿವೆ. ಮೈಸೂರು ಪ್ರಭು ದೊಡ್ಡದೇವರಾಜ ಒಡೆಯರು ಎಡೆಯೂರು ಶ್ರೀ ಸಿದ್ಧ ಲಿಂಗೇಶ್ವರಸ್ವಾಮಿಯ ದೇವಾಲಯಕ್ಕೆ ದತ್ತಿಗಳನ್ನು ಬಿಟ್ಟು ಕೊಟ್ಟಿದ್ದಾರೆಂದು ಇತಿಹಾಸದಿಂದ ಗೊತ್ತಾಗುತ್ತದೆ. ಟಿಪ್ಪು ಸುಲ್ತಾನನು ತುಂಬ ಭಕ್ತಿಯಿಂದ ಈ ಕ್ಷೇತ್ರದ ದತ್ತಿಗಳನ್ನು ಊರ್ಜಿತಗೊಳಿಸಿ ಪೂಜಾಕಾರ್ಯಗಳಿಗೆ ನೆರವಾದನು. ಮೈಸೂರಿನ ಶ್ರೀಮನ್ ಮಹಾರಾಜರಾದ ಶ್ರೀ ಜಯಚಾಮರಾಜ ಒಡೆಯರು ಎಡೆಯೂರಿನಲ್ಲಿ ಶ್ರೀ ತೋಂಟದ ಸಿದ್ಧಲಿಂಗರ ಶಿವಯೋಗ ಸಮಾಧಿಯ ಮೇಲೆ ನಿರ್ಮಿಸಿರುವ ರಜತ ಶಿವಯೋಗ ಮಂಟಪದ ಅನಾವರಣೋತ್ಸವವನ್ನು ತಾ. ೨೨–೮–೧೯೫೬ ರಂದು ನೆರವೇರಿಸಿದರು. "ಭಾರತದ ಧರ್ಮಗಳಲ್ಲಿ ಪರಸ್ಪರ ವೈವಿಧ್ಯವು ಕಂಡುಬರುತ್ತಿದ್ದರೂ ಎಲ್ಲ ಧರ್ಮಗಳ ಗುರಿಯೂ ಒಂದೇ. ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯವರು ವೀರಶೈವ ಧರ್ಮದ ಪ್ರತಿಪಾದಕರೆನಿಸಿದ್ದರೂ ಅವರಿಗೆ ಎಲ್ಲ ಪ್ರಾಂತಗಳ ವರೂ ಎಲ್ಲ ಜನಾಂಗಗಳವರೂ ಭಕ್ತರಾಗಿದ್ದರು ವೆಂದಮೇಲೆ ಅವರ ಪ್ರಭಾವವು ಮಹತ್ತರವಾದುದು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಎಲ್ಲ ಮತಧರ್ಮಗಳ ಸಂಸ್ಥಾಪಕರೂ ಎಲ್ಲ ರಿಗೂ ವಂದ್ಯರು, ಪೂಜ್ಯರು ಎಂಬುದೇ ನಮ್ಮ ಸಂಸ್ಕೃತಿಯ

ಜೀವಾಳ'' ಎಂಬುದಾಗಿ ಶ್ರೀ ಜಯಚಾಮರಾಜ ಒಡೆಯರು ಸರ್ವಸಮ್ಮತವಾದ ಅಭಿಪ್ರಾಯವನ್ನು ಅಂದು ವ್ಯಕ್ತಪಡಿಸಿದರು.

೧೨

ಸಿದ್ಧಲಿಂಗ ಯತಿವರ್ಯರ ವಿಚಾರಗಳು ಅನೇಕ ಶಿಲಾಶಾಸನಗಳಲ್ಲಿ ಕಂಡುಬರುತ್ತವೆ. ಚಿತ್ರದುರ್ಗದ ಮೋಕ್ಷಗುಂಡಂ ಶ್ರೀನಿವಾಸ ಅವಧಾನಿಯವರ ತೋಟದಲ್ಲಿರುವ ಒಂದು ಶಾಸನದಲ್ಲಿ ಸಿದ್ಧಲಿಂಗರ ವಚನವೊಂದು ಉಲ್ಲೇಖಿಸಿರುತ್ತದೆ (೧೭೩೮). ಈ ವಚನದ ಮೇಲುಗಡೆಯಲ್ಲಿ ಷಡಕ್ಷರ ಮಂತ್ರದ ಕುಂಡಲಿ ಇದೆ. ಆ ಮಂತ್ರಮಹಿಮೆಯನ್ನು ಈ ಶಾಸನದಲ್ಲಿ ಹೇಳಿದೆ. ಇದನ್ನು ಯಂತ್ರದ ಕಲ್ಲು ಎಂದು ಕರೆಯುತ್ತಾರೆ. ಅವರ ವಚನಗಳನ್ನು ಜನರು ದಿವ್ಯ ಮಹಾಮಂತ್ರಗಳಂತೆ ಭಕ್ತಿಯಿಂದ ಉಚ್ಚರಿಸುತ್ತಿದ್ದರೆಂದು ತಿಳಿದುಬರುತ್ತದೆ. ಇದು ಸಮಾಜದಲ್ಲಿ ಸ್ಥಾನಗೌರವವನ್ನು ನಿರ್ದೇಶಿಸುತ್ತದೆ.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಸಿದ್ಧಲಿಂಗ ಶಿವಯೋಗಿವರ್ಯರ ಪ್ರಭಾವ ಸ್ಪಷ್ಟವಾಗಿ ಕಂಡುಬರುತ್ತದೆ. ವಿರಕ್ತ ತೋಂಟದಾರ್ಯ, ಶಾಂತೇಶ, ಹೇರಂಬ ಮೊದಲಾದ ಕವಿವರರು ಸಿದ್ಧಲಿಂಗರ ಜೀವನಚರಿತ್ರೆಯನ್ನು ಕಾವ್ಯಪುರಾಣಗಳಲ್ಲಿ ಹಾಡಿರುತ್ತಾರೆ. ಅಲ್ಲದೆ, ಚೆನ್ನಬಸವ ಪುರಾಣ, ಗುರುರಾಜ ಚಾರಿತ್ರ್ಯದಂಥ ಮಹಾಕೃತಿಗಳಲ್ಲಿಯೂ ಇವರ ಚರಿತ್ರೆ ಉಕ್ತವಾಗಿದೆ. ತೋಂಟದಾರ್ಯರ ರಗಳೆ ಅವರ ಪವಾಡಗಳನ್ನು ಉಲ್ಲೇಖಿಸುತ್ತದೆ. ನಿರಂಜನ ವಂಶರತ್ನಾಕರ ಮತ್ತು ಜಂಗಮ ವಂಶದರ್ಪಣ ಎಂಬ ಗದ್ಯ ಕೃತಿಗಳಲ್ಲಿಯೂ ಸಿದ್ಧಲಿಂಗರ ಜೀವನ ಪರಿಚಯವಿದೆ. ಸಿದ್ಧಲಿಂಗರ ಶಿಷ್ಯಪರಂಪರೆಯಿಂದ ಕನ್ನಡ

ಸಾಹಿತ್ಯ ಸಂಪುಷ್ಟವಾಗಿ ಬೆಳೆಯಿತು. ಗುಬ್ಬಿಯ ಮಲ್ಲಣ, ಸ್ವತಂತ್ರ ಸಿದ್ಧಲಿಂಗ, ಗೂಳೂರು ಸಿದ್ಧವೀರ, ಗುಮ್ಮಳಾಪುರದ ಸಿದ್ಧಲಿಂಗ, ಸಾನಂದ ಶಿವಯೋಗಿ, ಗುರುನಂಜ ಕವಿ, ಮಲ್ಲಿಕಾರ್ಜುನ ಕವಿ, ಬಸವಲಿಂಗ ಶಿವಯೋಗಿ, ಗುಬ್ಬಿಯ ಮಲ್ಲಣಾರ್ಯ, ಪ್ರಭುಲಿಂಗ ಕವಿ, ಓದುವ ಗಿರಿಯ, ಚೇರಮಾಂಕ, ಮುರಿಗೆಯ ಶಾಂತವೀರ, ಸಂಪಾದನೆಯ ಚೆನ್ನಂಜೇದೇವ, ಇಮ್ಮಡಿ ತೋಂಟದಾರ್ಯ, ಮುರುಗಿ ದೇಶಿಕೇಂದ್ರ, ಮಹಾಂತ ಸ್ವಾಮಿ, ಶಾಂತೇಶ, ಎಳಮಲೆಯ ಗುರುಶಾಂತದೇವ, ವಿರೂಪಾಕ್ಷಪಂಡಿತ, ಷಡಕ್ಷರದೇವ, ಇಮ್ಮಡಿ ಮುರುಗಿಸ್ವಾಮಿ, ಬಸವ ಲಿಂಗ ಕವಿ ; ಸಿದ್ಧಲಿಂಗ ಶಿವಯೋಗಿ, ಸಂಪಾದನೆಯ ವೀರಣಾರ್ಯ, ಎಳಂದೂರು ಹರೀಶ್ವರ, ಶಾಂತವೀರದೇಶಿಕ, ಸಿದ್ಧನಂಜದೇಶಿಕ, ಶಾಂತಿಮಲ್ಲ, ಪರ್ವತಶಿವಯೋಗಿ, ಸಂಪಾದನೆಯ ಪರ್ವತೇಶ, ಸೋಮಶೇಖರ ಶಿವಯೋಗಿ, ಸೋಮಕವಿ, ನೂರೊಂದಯ್ಯ, ನಂದಿನಾಥ, ಮೋದಿಯರುದ್ರ—ಮೊದಲಾದ ಅನೇಕ ಕವಿಗಳು ಎಡೆಯೂರು ಸಿದ್ಧಲಿಂಗರ ಮಹಿಮೆಯನ್ನು ಕಾವ್ಯಗಳಲ್ಲಿ ನಿರೂಪಿಸಿದ್ದಾರೆ. ಈಗಲೂ ಅನೇಕ ವಿದ್ವಾಂಸರು ಅವರ ಜೀವನ ಚರಿತ್ರೆಯನ್ನು ಗದ್ಯ, ಪದ್ಯ, ಲಾವಣಿ, ನಾಟಕ, ಸಹಸ್ರನಾಮ, ಸ್ತೋತ್ರ,ಹಾಡುಪದಗಳ ರೂಪದಲ್ಲಿ ರಚಿಸುತ್ತಿದ್ದಾರೆ.ಇನ್ನೊಂದು ಸಾಹಿತ್ಯ ಬೇರೆ ಯಾವ ಶಿವಶರಣರ ವಿಚಾರದಲ್ಲಿಯೂ ಹುಟ್ಟಿದಂತಿಲ್ಲ.

ಸಿದ್ಧಲಿಂಗರು ಪ್ರಾಚೀನ ಗುರುಪೀಠ ಪರಂಪರೆಯಲ್ಲಿ ಪರಮ ಗುರುವಾದರು. ಅವರು ವೀರಶೈವವಾಙ್ಮಯದಲ್ಲಿ ಸಂಪೂಜ್ಯರಾದರು. ಹರದನಹಳ್ಳಿಯ (ವಾಣಿಜ್ಯಪುರದ) ಸಿದ್ಧಸಿಂಹಾಸನದ ಘನತೆಗೌರವಗಳು ಸಿದ್ಧಲಿಂಗರಿಂದ ಮಹೋನ್ನತವಾದುವು. ಈ

ಮೂಲಪೀಠ ಮಹಾಶ್ವತ್ಥವೃಕ್ಷ ಇಂದು ಅಖಂಡ ಕರ್ಣಾಟಕದಲ್ಲಿ ತನ್ನ ಧರ್ಮಛಾಯೆಯನ್ನು ಪಸರಿಸಿದೆ. ಇದು ವೀರಶೈವ ವಿರತ ಧರ್ಮ ಸಿಂಹಾಸನ; ಅವರು ವಿರತಧರ್ಮ ಜಗದ್ಗುರು. ಅವರು ವಿರಕ್ತ ಪಂಥವನ್ನು ಉದ್ಧರಿಸಿ ಅನುಗ್ರಹಿಸಿ ವ್ಯವಸ್ಥೆಗೊಳಿಸಿದ್ದರಿಂದ ಅವರನ್ನು ಶೂನ್ಯಸಿಂಹಾಸನಾಧೀಶ್ವರರೆಂದೂ ಗೌರವಿಸುತ್ತಾರೆ. "ಬಯಲ ಸಂಭ್ರಮದ ತಾರ್ಕಿಕರನ್ನು ಕಂಡರೆ ಮಾಗಿಯ ಕೋಗಿಲೆಯಂತೆ ಮುಖದ ಮುನಿಸಾಗಿರಿಸಯ್ಯಾ" ಎಂಬ ಮಹಾರುದ್ರ ಮುನಿ ಇವರು! ಇವರು ಯೋಗಾಗ್ನಿನೇತ್ರರು; ಪರಮವಿರತರು; ವಿರಕ್ತಸಂಪೂಜ್ಯರು; ಶಿವತತ್ತ್ವ ಪ್ರಶಾಂತಹೃದಯರು. "ಕೆಂಡಗಣ್ಣಿನ ಶರಣರೊಡನೆ ಸರಸವಾಡಿದರೆ ಕೆಂಡವ ಕೊಂಡು ಕೆನ್ನೆಯ ತುರಿಸಿಕೊಂಡಂತಾಯಿತ್ತು" ಎಂಬ ಅವರ ರುದ್ರವಚನವನ್ನು ಅವನ ಶಿಷ್ಯಕೋಟಿ ಭಯಭಕ್ತಿಯಿಂದ ಪಾಲಿಸುತ್ತಿದೆ. ಈ ಪ್ರಾಂತ್ಯದಲ್ಲಿ ಮಹಾರಣ್ಯ ಮಧ್ಯದಲ್ಲಿ ಹೆಗ್ಗಡದೇವನಕೋಟೆಯ ಸಮೀಪದಲ್ಲಿ ಕೆಂಡಗಣ್ಣ ಸ್ವಾಮಿಗಳ ಗದ್ದುಗೆ ಇದೆ. ಅವರು ಪರಮವಿರತರು. ಸಿದ್ಧಲಿಂಗರು ನುಡಿದ ವಚನ ಬಹುಶಃ ಈ ಕೆಂಡಗಣ್ಣ ಸ್ವಾಮಿಯನ್ನು ಕುರಿತುದಾಗಿರಬಹುದೇ? ಅವರು ಸಿದ್ಧಲಿಂಗರಿಗಿಂತ ಪ್ರಾಚೀನರಿರಬಹುದು. ಕೊಳ್ಳೇಗಾಲ ಪ್ರಾಂತದ ಕನಕಗಿರಿ ಎಂಬುದು ಕೆಂಡಗಣ್ಣ ಸ್ವಾಮಿಯ ಕ್ಷೇತ್ರವಾಗಿದೆ. ಸಿದ್ಧಲಿಂಗರ ಶಿಷ್ಯರಲ್ಲಿ ಹಲವರು ಸ್ಥಾಪಿಸಿದ ಮಠಗಳು ಈಗ ಈ ಪ್ರಾಂತದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿವೆ. ಇವರ ಶಿಷ್ಯ ರೇವಣಸಿದ್ಧರು ರಾಮನಗರ ಸಮೀಪದ ಗಿರಿಯೊಂದರಲ್ಲಿ ತಪಸ್ಸು ಮಾಡಿದರು. ಅದೇ ರೇವಣಸಿದ್ಧೇಶ್ವರನ ಬೆಟ್ಟ. ಇನ್ನೊಬ್ಬ ಶಿಷ್ಯ ಮರುಳಸಿದ್ಧರು. ಚಿಕ್ಕನಾಯಕನ ಹಳ್ಳಿಯ ಪ್ರಾಂತದ ಕುಪ್ಪೂರಿನಲ್ಲಿ

ಲಿಂಗೈಕ್ಯರಾದರು. ಅವರ ಗದ್ದುಗೆ ಈಗಲೂ ಅಲ್ಲಿದೆ. ಇದ ರಂತೆಯೇ ಕಂಬಳಿಸ್ವಾಮಿ ಎಂಬುವರು ನಂಜನಗೂಡು ಬಳಿ ಕಪಿಲಾ ತೀರದಲ್ಲಿ ಮಲ್ಲನ ಮೂಲೆ ಎಂಬ ಸ್ಥಳದಲ್ಲಿ ಅನುಷ್ಠಾನ ಮಾಡಿದರು. ಅವರು ಅಲ್ಲಿಯೇ ಸಮಾಧಿಸ್ಥರಾದರು. ಕೊಗಲೂರು ಘನಲಿಂಗರು, ಸುತ್ತೂರು ಮಠಾಧೀಶ್ವರರಾದರು. ಇವರು ಸಿದ್ಧ ಲಿಂಗರ ಆಪ್ತಶಿಷ್ಯರಲ್ಲಿ ಪ್ರಮುಖರಾಗಿದ್ದರು. ಇನ್ನೊಬ್ಬರು ಸ್ವತಂತ್ರ ಸಿದ್ಧಲಿಂಗರು. ಇವರ ಗದ್ದುಗೆ ಕೃಷ್ಣರಾಜಪೇಟೆಯ ಹತ್ತಿರ ಇದೆ. ಹೀಗೆ, ಸಿದ್ಧಲಿಂಗರ ಎಲ್ಲ ಶಿಷ್ಯರ ಮಠಗಳ ನ್ನಾಗಲಿ ಗದ್ದುಗೆಗಳನ್ನಾಗಲಿ ಗುರುತಿಸಲು ಸಾಧ್ಯವಿದೆ. ಸಿದ್ಧ ಲಿಂಗರು ಕನ್ನಡ ನಾಡಿನಲ್ಲಿ ಆಗಿ ಹೋದ ಮಹಾಮಹಿಮರಲ್ಲಿ ಅಗ್ರಗಣ್ಯರಾಗಿರುತ್ತಾರೆ.

ಸಿದ್ಧಲಿಂಗರಿಗೆ ತೊಂಬತ್ತು ವರ್ಷವಾಯಿತು. ಅವರು ತಮ್ಮ ಪರಮಾಪ್ತ ಶಿಷ್ಯ ಬೋಳಬಸವೇಶ್ವರನನ್ನು ಅನುಗ್ರಹಿಸಿ ಗುರು ಪಟ್ಟ ಕಟ್ಟಿದರು. ಅನಂತರ ಕೆಲವು ದಿನಗಳಲ್ಲಿಯೇ ಸಿದ್ಧ ಲಿಂಗರು ಲಿಂಗೈಕ್ಯರಾದರು. ''ಘೃತ ಘೃತ ಬೆರಸಿದಂತೆ, ಕ್ಷೀರ ಕ್ಷೀರ ಬೆರಸಿದಂತೆ, ತೈಲ ತೈಲ ಬೆರಸಿದಂತೆ, ನೀರು ನೀರು ಬೆರಸಿದಂತೆ, ಜ್ಯೋತಿ ಜ್ಯೋತಿ ಬೆರಸಿದಂತೆ, ಬಯಲು ಬಯಲ ಬೆರಸಿದಂತೆ'' ಅವರ ಆತ್ಮಲಿಂಗ ವಿಶ್ವಲಿಂಗದಲ್ಲಿ ಸೇರಿಹೋಯಿತು. ''ಚಂದ್ರನಿಂದಾದ ಕಲೆ ಚಂದ್ರನನೆ ಬೆರಸಿ ಚಂದ್ರನಾದಂತೆ. ಸೂರ್ಯನಿಂದಾದ ಕಿರಣ ಸೂರ್ಯನನೆ ಬೆರಸಿ ಸೂರ್ಯ ನಾದಂತೆ, ಅಗ್ನಿಯಿಂದಾದ ಕಾಂತಿ ಅಗ್ನಿಯನೆ ಬೆರಸಿ ಅಗ್ನಿ ಯಾದಂತೆ. ದೀಪದಿಂದಾದ ಬೆಳಗು ದೀಪವನೆ ಬೆರಸಿ ದೀಪ ವಾದಂತೆ, ಸಮುದ್ರದಿಂದಾದ ನದಿ ಸಮುದ್ರವನೆ ಬೆರಸಿ ಸಮುದ್ರ

ವಾದಂತೆ" ಅವರು ಶಿವತತ್ತ್ವದಲ್ಲಿ ಉದಯಿಸಿ ಆ ಶಿವತತ್ತ್ವದಲ್ಲಿಯೇ ಸೇರಿಹೋದರು.

"ಗಾಳಿಗಂಧವನಪ್ಪಿದಂತೆ, ಬಯಲು ಬಯಲನಪ್ಪಿದಂತೆ, ಬೆಳಗು ಬೆಳಗನಪ್ಪಿ ಮಹಾಬೆಳಗಾದಂತೆ, ಶರಣ ಲಿಂಗವನಪ್ಪಿ ಮಹಾ ಲಿಂಗವೇ ತಾನು ತಾನಾಗಿ ನಿರ್ವಯಲಾದನು ನೋಡಾ ಮಹಾ ಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ" ಎಂಬಂತೆ ಎಡೆಯೂರು ತೋಂಟದ ಸಿದ್ಧಲಿಂಗಯತಿವರ್ಯರು ಪರಮನಿರಂಜನ ಸಿದ್ಧ ರಾದರು.

# ಗ್ರಂಥಾವಲೋಕನ


ಷಟ್‌ಸ್ಥಲ ಜ್ಞಾನಸಾರಾಮೃತ—(ಸಿದ್ಧೇಶ್ವರ ವಚನ)

ಘನಲಿಂಗದೇವರ ವಚನಗಳು

ಸ್ವತಂತ್ರ ಸಿದ್ಧಲಿಂಗೇಶ್ವರ ವಚನಗಳು

ನಿರಂಜನವಂಶರತ್ನಾಕರ

ಜಂಗಮ ವಂಶದರ್ಪಣ

ಸಿದ್ಧೇಶ್ವರ ಪುರಾಣ

ಷಟ್‌ಸ್ಥಲ ಪ್ರಭೆ—ಡಾ. ಆರ್. ಸಿ. ಹಿರೇಮಠ

ನಿರಂಜನ ಜಂಗಮವಂಶ ಮತ್ತು ತೋಂಟದ
ಸಿದ್ಧಲಿಂಗೇಶ್ವರರು—ಪಂಡಿತ ಶ್ರೀ ಚನ್ನಪ್ಪ ಎರೆಸೀಮೆ

ಶೂನ್ಯಸಿಂಹಾಸನ—ವಿದ್ಯಾವಿಭೂಷಣ ಓ.ಎನ್ ಲಿಂಗಣ್ಣಯ್ಯ

ಮೈಸೂರು ಗೆಝೆಟಿಯರ್—(ಐದನೆಯ ಸಂಪುಟ)

ಕುಣಿಗಲು ತಾಲ್ಲೂಕಿನ ಶಾಸನಗಳು

ಕನ್ನಡ ಕವಿ ಚರಿತೆ—(ಭಾಗ ೨ ಪ್ರಾಕ್ತನ ವಿಮರ್ಶ ವಿಚಕ್ಷಣ
ರಾವ್‌ಬಹಾದ್ದೂರ್ ಆರ್. ನರಸಿಂಹಾಚಾರ್ಯ



ಸಂ. ೩೧೨೪೩—ಎಂಯುಪಿಎಂ—ಪ್ರತಿ ೨೦,೦೦೦—೨೩-೫-೧೯೬೦

## ಕೆಲವು ಸಾಹಿತ್ಯ ಕೃತಿಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯ
೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ

೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ
೫೮. ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ
೫೯. ಬಂಧುವರ್ಮ—ಬಿ. ಎಸ್. ಸಣ್ಣಯ್ಯ
೬೦. ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ. ಪಿ. ಕೃಷ್ಣಕುಮಾರ್